# ಕರ್ನಾಟಕದ ಪ್ರಥಮ ದಲಿತ ಮಂತ್ರಿ ಆರ್. ಚನ್ನಿಗರಾಮಯ್ಯ ಅವರ ಜೀವನ ಮತ್ತು ಸಾಧನೆ

(ಕನ್ನಡ ವಿಶ್ವವಿದ್ಯಾಲಯ, ಹಂಪಿ, ಚರಿತ್ರೆ ವಿಭಾಗಕ್ಕೆ ಎಂ.ಫಿಲ್ ಪದವಿಗಾಗಿ ಸಲ್ಲಿಸಿದ ನಿಬಂಧ)


ಸಂಶೋಧಕ

ಬಸವರಾಜು ಕೆ.ಆರ್.





ಸಲೆ

ಕರು

ಕನ್ನಡ ವಿಶ್ವವಿದ್ಯಾಲಯ,







ಚರಿತ್ರೆ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-೫೮೩ ೨೭೬

೨೦೧೧-೧೨

# ಕರ್ನಾಟಕದ ಪ್ರಥಮ ದಲಿತ ಮಂತ್ರಿ ಆರ್.ಚನ್ನಿಗರಾಮಯ್ಯ ಅವರ ಜೀವನ ಮತ್ತು ಸಾಧನೆ

(ಕನ್ನಡ ವಿಶ್ವವಿದ್ಯಾಲಯ, ಹಂಪಿ, ಚರಿತ್ರೆ ವಿಭಾಗಕ್ಕೆ ಎಂ.ಫಿಲ್ ಪದವಿಗಾಗಿ ಸಲ್ಲಿಸಿದ ನಿಬಂಧ)


ಸಂಶೋಧಕ

**ಬಸವರಾಜು ಕೆ.ಆರ್.**

ಮಾರ್ಗದರ್ಶಕರು

**ಡಾ.ಎನ್.ಚಿನ್ನಸ್ವಾಮಿ ಸೋಸಲೆ**

ಮುಖ್ಯಸ್ಥರು ಹಾಗೂ ಸಹ ಪ್ರಾಧ್ಯಾಪಕರು

ಚರಿತ್ರೆ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ






ಚರಿತ್ರೆ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-೫೮೩ ೨೭೬

೨೦೧೧-೧೨

# ದೃಢೀಕರಣ ಪತ್ರ

"ಕರ್ನಾಟಕದ ಪ್ರಥಮ ದಲಿತ ಮಂತ್ರಿ ಆರ್.ಚನ್ನಿಗರಾಮಯ್ಯ ಅವರ ಜೀವನ ಮತ್ತು ಸಾಧನೆ" ಎಂಬ ನಿಂಬಂಧವನ್ನು ಕನ್ನಡ ವಿಶ್ವವಿದ್ಯಾಯಲ, ಚರಿತ್ರೆ ವಿಭಾಗದ ಎಂ.ಫಿಲ್.ಪದವಿಗಾಗಿ ಬಸವರಾಜು ಕೆ.ಆರ್. ಇವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಪ್ರಸ್ತುತ ನಿಬಂಧವು ಈ ಮೊದಲು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

30/6/12

ಡಾ.ಎನ್.ಚಿನ್ನಸ್ವಾಮಿ ಸೋಸಲೆ,
ಮಾರ್ಗದರ್ಶಕರು ಮತ್ತು ಸಹ ಪ್ರಾಧ್ಯಾಪಕರು
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ

ಡಾ.ಎನ್.ಚಿನ್ನಸ್ವಾಮಿ ಸೋಸಲೆ
ಅಸೋಸಿಯೇಟ್ ಪ್ರೊಫೆಸರ್
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ.
ವಿದ್ಯಾರಣ್ಯ - ೫೮೩ ೨೭೬

ಸ್ಥಳ : ವಿದ್ಯಾರಣ್ಯ
ದಿನಾಂಕ : 30/06/12

# ಪ್ರಮಾಣ ಪತ್ರ

"ಕರ್ನಾಟಕದ ಪ್ರಥಮ ದಲಿತ ಮಂತ್ರಿ ಆರ್.ಚನ್ನಿಗರಾಮಯ್ಯ ಅವರ ಜೀವನ ಮತ್ತು ಸಾಧನೆ" ಎಂಬ ನಿಂಬಂಧವನ್ನು ಡಾ.ಎನ್.ಚಿನ್ನಸ್ವಾಮಿ ಸೋಸಲೆ, ಸಹ ಪ್ರಾಧ್ಯಾಪಕರು, ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಎಂ.ಫಿಲ್ ಪದವಿಗಾಗಿ ಸಮಾಜ ವಿಜ್ಞಾನಗಳ ನಿಕಾಯ, ಚರಿತ್ರೆ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ.

ಪ್ರಸ್ತುತ ನಿಬಂಧವು ಈ ಮೊದಲು ಬೇರೆ ಯಾವುದೇ ಉದ್ದೇಶ ಅಥವಾ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

Basavaraju, K.R
ಬಸವರಾಜು ಕೆ.ಆರ್
ಸಂಶೋಧಕರು
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ

ಸ್ಥಳ : ವಿದ್ಯಾರಣ್ಯ
ದಿನಾಂಕ : 30-6-2012

# ಪರಿವಿಡಿ

ಅಧ್ಯಾಯ - ಒಂದು

# ಪ್ರಸ್ತಾವನೆ

೧.೧. ಅಧ್ಯಯನದ ಉದ್ದೇಶ, ಮಹತ್ವ ಮತ್ತು ವ್ಯಾಪ್ತಿ

೧.೨. ಅಧ್ಯಯನದ ವಿಧಿ ವಿಧಾನ ಹಾಗೂ ಸ್ವರೂಪ

೧.೩. ಈವರೆಗಿನ ಅಧ್ಯಯನಗಳ ಸಮೀಕ್ಷೆ

ಅಧ್ಯಾಯ - ಒಂದು

# ಪ್ರಸ್ತಾವನೆ

ಕರ್ನಾಟಕದ ರಾಜಕೀಯ ಚರಿತ್ರೆಯಲ್ಲಿ ಮೇಲ್ವರ್ಗದವರ ಆಳ್ವಿಕೆ ಪ್ರಬಲವಾಗಿರುವುದನ್ನು ಕಾಣಬಹುದು. ಉನ್ನತ ಹುದ್ದೆಗಳನ್ನು ಪ್ರಬಲ ಜಾತಿ ವರ್ಗದವರು ಅಲಂಕರಿಸಿಕೊಂಡಿದ್ದಾರೆ. ಇಂತಹ ಸಂದರ್ಭದಲ್ಲಿ ದಲಿತ ಸಮುದಾಯದ ವ್ಯಕ್ತಿಯೊಬ್ಬರು ನಾಡಿನ ಮಂತ್ರಿ ಪದವಿಯ ಚುಕ್ಕಾಣಿ ಹಿಡಿಯುವುದು, ಸ್ವತಂತ್ರ ರಾಜ್ಯದ ಏಕೀಕೃತ ಕರ್ನಾಟಕದ ಮಂತ್ರಿಮಂಡದಲ್ಲಿ ಸುಲಭದ ಮಾತಾಗಿರಲಿಲ್ಲ. ಪ್ರಬಲ ಜಾತಿ ವರ್ಗಗಳ ರಾಜಕಾರಣಿಗಳ ಸ್ಪರ್ಧೆಯ ನಡುವೆಯೂ ಈ ನಾಡಿನ ಒಬ್ಬ ದಲಿತ ಮಂತ್ರಿಯಾಗಿ ಎರಡು ಬಾರಿ ಆಳ್ವಿಕೆ ಮಾಡಿದ ಹೆಗ್ಗಳಿಕೆ ಆರ್.ಚನ್ನಿಗರಾಮಯ್ಯ ಅವರಿಗೆ ಸಲ್ಲುತ್ತದೆ. ನೇರ ನುಡಿಯ, ನಿಷ್ಠುರವಾದಿ, ಅಭಿವೃದ್ಧಿಯ ಹರಿಕಾರ, ದಲಿತ ಚಿಂತಕ, ಸಮಾಜ ಸುಧಾರಕ ಆರ್.ಚನ್ನಿಗರಾಮಯ್ಯ ಅವರು ಕರ್ನಾಟಕದ ಮೊದಲ ದಲಿತಮಂತ್ರಿಯಾಗಿ, ಕೆ.ಸಿ.ರೆಡ್ಡಿ ಸಂಪುಟದಲ್ಲಿ ಸ್ಥಾನ ಪಡೆಯುತ್ತಾರೆ. ದಲಿತ ವರ್ಗದಿಂದ ಬಂದವರಾದ್ದರಿಂದ ಆ ವರ್ಗದ ಶೋಷಿತರಲ್ಲಿ ವೈಚಾರಿಕ ಪ್ರಜ್ಞೆಯನ್ನು ಮೂಡಿಸಿದ್ದು ಗಮನಾರ್ಹವಾದುದು. ಇಂತಹ ಚನ್ನಿಗರಾಮಯ್ಯ ಅವರು ಜನಿಸಿದ್ದು ತುಮಕೂರು ಜಿಲ್ಲೆಯ ಕೊರಟಗೆರೆಯಲ್ಲಿ, ಆನೆಯ ಜೂನ್ ೧೯೧೧ರಲ್ಲಿ. ಅವರು ಶಿಕ್ಷಣವನ್ನು ಪಡೆದಿದ್ದು ಕಡಿಮೆ. ಆದರೂ ಅನುಭವದ ಸೇವಾನಿಷ್ಠೆ, ದೇಶಪ್ರೇಮ ಅವರಿಗೆ ಅಪಾರ ಜ್ಞಾನವನ್ನು ಹಾಗೂ ಲೋಕಾನುಭವವನ್ನು ಕೊಟ್ಟಿದ್ದವು. ಗಾಂಧೀಜಿಯವರ ವಿಚಾರಗಳಿಂದ ಪ್ರಭಾವಿತರಾಗಿ ಸ್ವಾತಂತ್ರ್ಯಪೂರ್ವದಲ್ಲಿಯೇ ಕೊರಟಗೆರೆಯಲ್ಲಿ ಸಾರ್ವಜನಿಕ ರಂಗಕ್ಕೆ ಕಾಲಿಟ್ಟರು. ಕೊರಟಗೆರೆ ಪುರಸಭೆ ಮತ್ತು ಜಿಲ್ಲಾ ಬೋರ್ಡ್ ಸದಸ್ಯರಾದರು. ೧೯೩೭ರಲ್ಲಿ ಮೈಸೂರು ಪ್ರಜಾಪ್ರತಿನಿಧಿ ಸಭಾ ಸದಸ್ಯರಾಗಿ ಹಾಗೂ ೧೯೪೧ರ ನ್ಯಾಯಾವಿಧಾಯಕ ಸಭಾ ಸದಸ್ಯರಾಗಿ ನೇಮಕವಾದರು. ಗಾಂಧೀಜಿ ಹರಿಜನರ ಸಮಸ್ಯೆಯ ಬಗ್ಗೆ ಉಪವಾಸ ಕೈಗೊಂಡಾಗ ಹಾಗೂ ದಲಿತರ ದೇವಾಲಯ ಪ್ರವೇಶ, ಸಹಪಂಕ್ತಿ ಭೋಜನ, ಪಾನ ನಿರೋಧ ಮುಂತಾದ ಆಂದೋಲನಗಳಲ್ಲಿ ಶ್ರೀಯುತರು ಧೈರ್ಯವಾಗಿ ದಿಟ್ಟತನದಿಂದ ದುಡಿದರು.

೧೯೪೨ರಲ್ಲಿ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿ ಸೆರೆಮನೆ ವಾಸವನ್ನು ಅನುಭವಿಸಿದರು. ಕೆ.ಸಿ.ರೆಡ್ಡಿ ಸಂಪುಟದಲ್ಲಿ ಅವರು ಪ್ರಥಮ ದಲಿತಮಂತ್ರಿಯಾದರು. ೧೯೫೬ರಲ್ಲಿಯೂ ಸಚಿವರಾಗಿದ್ದು ಸ್ಥಳೀಯ ಸಂಸ್ಥೆಗಳು, ಶಿಕ್ಷಣ, ಅರಣ್ಯ, ಕೃಷಿ, ರೇಷ್ಮೆ ಇಲಾಖೆಗಳಲ್ಲಿ ಇವರು ಮಂತ್ರಿಗಳಾಗಿ ಸೇವೆ ಸಲ್ಲಿಸಿದ್ದರು. ಕರ್ನಾಟಕ ಸರ್ಕಾರದಲ್ಲಿ ವಿಧಾನ ಪರಿಷತ್ ಸದಸ್ಯ, ಡೆಪ್ಯೂಟಿ ಸ್ಪೀಕರ್ ಮತ್ತು ಸ್ಪೀಕರ್ ಆಗಿಯೂ ಕೆಲಸ ಮಾಡಿದರು. ಲೋಕಸೇವಾ ಆಯೋಗದ ಸದಸ್ಯ ಹಾಗೂ ಅಧ್ಯಕ್ಷರಾಗಿಯೂ ಇವರು ಸೇವೆ ಸಲ್ಲಿಸಿದ್ದರು. ಮಂತ್ರಿಯಾಗಿ ದಲಿತರ ಅಭಿವೃದ್ಧಿ ಸಮಾಜ ಸುಧಾರಣಾ ಕಾರ್ಯಗಳನ್ನು ಕೈಗೊಂಡು, ನಿಸ್ವಾರ್ಥ ಸೇವೆಯನ್ನು ಸಲ್ಲಿಸಿ, ೨೧ನೆಯ ಜನವರಿ ೧೯೭೬ರಂದು ನಿಧನರಾದರು.

## ಅಧ್ಯಯನ ಉದ್ದೇಶ

ಇಂದು ರಾಜಕೀಯ ಕ್ಷೇತ್ರದಲ್ಲಿ ಸೇವಾ ಮನೋಭಾವ, ತ್ಯಾಗ ಕಣ್ಮರೆಯಾಗಿ ಜಾತಿ ಜಾತಿಗಳ ನಡುವೆ ವೈಷಮ್ಯ, ಸ್ತ್ರೀಯರ, ದಲಿತ ಶೋಷಣೆ ಹಾಗೂ ಪಕ್ಷಪಾತ ಅಂಧಾಭಿಮಾನ, ಒಳಸಂಚುಗಳು ಹೆಚ್ಚಾಗುತ್ತಿವೆ. ದಿನನಿತ್ಯದ ಜೀವನದಲ್ಲಿ ಹೆಚ್ಚಾಗಿ ಕಂಡುಬರುತ್ತಿದೆ. ಸ್ತ್ರೀಯರ, ದಲಿತರ, ಶೋಷಿತರ ಅಭಿವೃದ್ಧಿಗಾಗಿ ಸರ್ಕಾರ ಕೊಡುವ ಹಣವನ್ನು ಸಮರ್ಪಕವಾಗಿ ಖರ್ಚು ಮಾಡುವ, ಸೇವಾ ಮನೋಭಾವ ಇಂದು ಇಲ್ಲವಾಗಿದೆ. ಸರ್ಕಾರದ ಸೇವೆಯಲ್ಲಿದ್ದು, ಸೌಲಭ್ಯಗಳನ್ನು ಪಡೆದು, ಉನ್ನತ ಸ್ಥಾನ ಗಳಿಸಿದ ಅಧಿಕಾರಿಗಳು ಸ್ವಜಾತಿಯವರನ್ನು ವಂಚಿಸುತ್ತಿದ್ದು, ಹಿಂದಿನ ಜೀವನದ ಸ್ಥಿತಿಗತಿಗಳನ್ನು ಮರೆತಿದ್ದಾರೆ. ಇಂದು ಕೇವಲ ರಾಜಕೀಯದಲ್ಲಿ ಹಣ ಮಾಡುವಂತಹ ಹೀನಾಯ ಸ್ಥಿತಿಗೆ ರಾಜಕಾರಣಿಗಳು ತಲುಪಿದ್ದಾರೆ. ಇಂತಹ ಸಂದರ್ಭದಲ್ಲಿ ಸರಳ ಸಜ್ಜನಿಕೆಯ, ಪ್ರಾಮಾಣಿಕ, ನಿಸ್ವಾರ್ಥ, ದಲಿತ ಶೋಷಿತರ, ಅಭಿವೃದ್ಧಿ ಕಾರ್ಯಗಳನ್ನು ಮಾಡಿದಂತಹ ಚನ್ನಿಗರಾಮಯ್ಯ ಅವರ ಬದುಕು ಮತ್ತು ಸಾಧನೆಗಳನ್ನು ಸಮಾಜದ ಅಭಿವೃದ್ಧಿಗೆ ಅವರು ನೀಡಿದ ಕೊಡುಗೆಯನ್ನು ಸಬಾಲ್ಟರ್ನ್ ಚರಿತ್ರೆಯಡಿಯಲ್ಲಿ ಅಧ್ಯಯನ ಮಾಡುತ್ತಾ, ಸಮಕಾಲೀನ ಜನರ ಗಮನ ಸೆಳೆದು ಚಿಂತನೆಗೆ ಒಳಪಡಿಸುವುದೇ ಈ ಅಧ್ಯಯನದ ಪ್ರಮುಖವಾದ ಉದ್ದೇಶವಾಗಿದೆ.

## ಅಧ್ಯಯನದ ಮಹತ್ವ

ಕರ್ನಾಟಕದ ಪ್ರಥಮ ದಲಿತಮಂತ್ರಿ ಆರ್.ಚನ್ನಿಗರಾಮಯ್ಯ ಅವರ ಅಧ್ಯಯನ ಸಮಾಜದ ಪುನಾರಚನೆಯ ದೃಷ್ಟಿಯಿಂದ ಮಹತ್ವದ್ದಾಗಿದೆ. ಇತಿಹಾಸವನ್ನು ಮರೆತವರು ಇತಿಹಾಸವನ್ನು ಸೃಷ್ಟಿಸಲಾರರು ಎಂಬ ಬಾಬಾಸಾಹೇಬ್ ಅಂಬೇಡ್ಕರ್ ಅವರ ಮಾತಿನಂತೆ ಇಂದು ಇತಿಹಾಸ ಮರೆತು ಬದುಕುತ್ತಿರುವ ಸಮಾಜಕ್ಕೆ ಐತಿಹಾಸಿಕ ಪ್ರಜ್ಞೆಯನ್ನು ಮೂಡಿಸಲು ಅಧ್ಯಯನ ಸಹಾಯಕವಾಗಲಿದೆ. ಈ ದೃಷ್ಟಿಯಿಂದ ಚನ್ನಿಗರಾಮಯ್ಯ ಅವರ ನಿಸ್ವಾರ್ಥ ಸೇವಾ ಮನೋಭಾವ ಅವರ ಆದರ್ಶ ಜೀವನದ ಬಗ್ಗೆ ತಿಳಿಯುವ ಪ್ರಸ್ತುತ ಅಧ್ಯಯನವನ್ನು ಕೈಗೊಳ್ಳಲಾಗಿರುತ್ತದೆ. ಬದುಕಿನಲ್ಲಿ ಅವರ ವಿಚಾರಧಾರೆಗಳನ್ನು ಅಳವಡಿಸಿಕೊಳ್ಳುವ ದೃಷ್ಟಿಯಿಂದ ಅವರ ಪ್ರಗತಿಯು ಅಸ್ಪೃಶ್ಯರಲ್ಲಿ ಕೀಳರಿಮೆ, ಮುಜುಗರ, ಹಿಂಜರಿಕೆ, ಭಯ ಮೊದಲಾದವನ್ನು ಹೋಗಲಾಡಿಸಲು ಪೂರಕವಾಗಬಹುದೆಂದು ನಂಬಲಾಗಿದೆ. ಈ ಸಮುದಾಯದವರಿಗೆ ಶೈಕ್ಷಣಿಕ, ಸಾಮಾಜಿಕ,

ಆರ್ಥಿಕ, ರಾಜಕೀಯ ಮತ್ತು ಸಾಂಸ್ಕೃತಿಕವಾದ ಇನ್ನಿತರ ಮಹತ್ವದ ಅಂಶಗಳ ಅರಿವನ್ನು ಉಂಟುಮಾಡುವ ದೃಷ್ಟಿಯಿಂದ ಈ ಅಧ್ಯಯನವು ಪ್ರೇರಣೆಯಾಗಬಹುದೆಂದು ನಂಬಲಾಗಿದೆ.

### ಅಧ್ಯಯನದ ವ್ಯಾಪ್ತಿ

ಪ್ರಸ್ತುತ ಅಧ್ಯಯನವು ಕರ್ನಾಟಕದ ಪ್ರಥಮ ದಲಿತಮಂತ್ರಿ ಆರ್.ಚನ್ನಿಗರಾಮಯ್ಯನವರ ಜೀವನ ಸಾಧನೆ ಎಂಬ ಶೀರ್ಷಿಕೆಯು ತನ್ನದೇ ಆದ ವ್ಯಾಪ್ತಿ ಹಾಗೂ ಮಿತಿಗಳಿಗೆ ಒಳಪಟ್ಟಿದೆ. ಆರ್.ಚನ್ನಿಗರಾಮಯ್ಯ ಅವರ ಜೀವನ ಮತ್ತು ಮಂತ್ರಿಯಾಗಿ ಸಾಧಿಸಿದಂತಹ ಸಾಧನೆಗಳನ್ನು ಮಾತ್ರ ಇಲ್ಲಿ ಕೇಂದ್ರಬಿಂದುವನ್ನಾಗಿಸಿಕೊಳ್ಳಲಾಗಿದೆ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನದ ವ್ಯಾಪ್ತಿಯು ೧೯೧೧ರಿಂದ ೧೯೭೭ರವರೆಗಿನ ಅವಧಿಯ ಅವರ ಜೀವನ, ದಲಿತರ ಅಭಿವೃದ್ಧಿ ಕಾರ್ಯಗಳು, ರಾಜಕೀಯ ಕ್ಷೇತ್ರದಲ್ಲಿ ಸಾಧಿಸಿದ ಪ್ರಗತಿಯ ಬಗ್ಗೆ ಸಮಾಜಕ್ಕೆ ಪರಿಚಯಿಸುವುದಾಗಿದೆ. ಈ ಉದ್ದೇಶದಿಂದ ಪ್ರಸ್ತುತ ಅಧ್ಯಯನವು ತನ್ನದೇ ಆದ ಮಿತಿ ಹಾಗೂ ವ್ಯಾಪ್ತಿಯನ್ನು ಹೊಂದಿದೆ.

### ಅಧ್ಯಯನದ ವಿಧಿ ವಿಧಾನ

ಪ್ರಸ್ತುತ ಅಧ್ಯಯನವು ಆರ್.ಚನ್ನಿಗರಾಮಯ್ಯ ಅವರ ಜೀವನ ಮತ್ತು ರಾಜಕೀಯ ಸಾಧನೆಗಳನ್ನು ಚಾರಿತ್ರಿಕವಾಗಿ ದಾಖಲಿಸಿ ವಿಮರ್ಶಾತ್ಮಕವಾಗಿ ವಿಶ್ಲೇಷಣೆ ನಡೆಸುವಂಥದ್ದು. ಎಲ್ಲಾ ಬಗೆಯ ಪ್ರಾಥಮಿಕ ಹಾಗೂ ಇತರೆ ಆಕರ ಸಾಮಗ್ರಿಗಳು ಇಲ್ಲಿ ಬಳಕೆಯಾಗಿವೆ. ನೇರವಾದ ಹಾಗೂ ಪೂರಕವಾಗಿ ದೊರೆಯುವ ಎಲ್ಲಾ ಬಗೆಯ ವಿವರ, ಕಾಗದ ಪತ್ರ ದಾಖಲೆಗಳು, ಸಂದರ್ಶನ ಇತ್ಯಾದಿಗಳನ್ನು ಬಳಸಿಕೊಳ್ಳಲಾಗಿದೆ.

ಈ ಹಿನ್ನೆಲೆಯಲ್ಲಿ ರಾಜ್ಯದ ಪತ್ರಾಗಾರ ಇಲಾಖೆ, ಸರ್ಕಾರಿ ಹಾಗೂ ಖಾಸಗಿ ಗ್ರಂಥಾಲಯಗಳು, ಸಂಘಸಂಸ್ಥೆಗಳನ್ನು ಬಳಸಿಕೊಳ್ಳಲಾಗಿದೆ. ಚರಿತ್ರೆಯ ಶಿಸ್ತಿನ ವಿಧಿ ವಿಧಾನಗಳ ಮೂಲಕ ಪರೀಕ್ಷಿಸಿ ವಿಶ್ಲೇಷಿಸುವ ಪ್ರಯತ್ನ ಇಲ್ಲಿನದು.

### ಅಧ್ಯಯನದ ಸ್ವರೂಪ

ಪ್ರಸ್ತುತ ಅಧ್ಯಯನವು ಆರ್.ಚನ್ನಿಗರಾಮಯ್ಯ ಅವರ ಜೀವನ ಮತ್ತು ರಾಜಕೀಯ ಸಾಧನೆಗಳನ್ನು ಕುರಿತು ವಿಶ್ಲೇಷಿಸುವುದಾಗಿರುತ್ತದೆ. ಮೊದಲನೇ ಅಧ್ಯಾಯವು ಪೀಠಿಕೆ, ಉದ್ದೇಶ, ಮಹತ್ವ ಹಾಗೂ ವ್ಯಾಪ್ತಿ, ವಿಧಿ ವಿಧಾನ, ಸ್ವರೂಪಗಳನ್ನು ಕುರಿತ ವಿವರಗಳನ್ನು ಒಳಗೊಂಡಿದೆ. ಎರಡನೇ ಅಧ್ಯಾಯವು ಚನ್ನಿಗರಾಮಯ್ಯ ಅವರ ಜೀವನ ಪರಿಚಯ, ಪರಿಸರ ಪ್ರಭಾವ, ಶಿಕ್ಷಣ, ಕೌಟುಂಬಿಕ ಜೀವನವನ್ನು ಕುರಿತ ಮಾಹಿತಿಯನ್ನೇ ನಮೂದಿಸಲಾಗಿದೆ. ಮೂರನೇ ಅಧ್ಯಾಯವು ಚನ್ನಿಗರಾಮಯ್ಯ ಅವರು ಗಾಂಧೀಜಿ ಅವರ ಚಿಂತನೆಗಳಿಂದ ಪ್ರಭಾವಿತರಾಗಿ ಸ್ವಾತಂತ್ರ್ಯ ಚಳುವಳಿಯಲ್ಲಿ ಸಕ್ರಿಯವಾಗಿ ಶ್ರಮಿಸಿದ ಬಗೆಯನ್ನು ಪರಿಶೀಲಿಸಲಾಗಿದೆ. ನಾಲ್ಕನೇ ಅಧ್ಯಾಯವು ಚನ್ನಿಗರಾಮಯ್ಯ ಅವರ ರಾಜಕೀಯ ಪ್ರವೇಶ ಹಾಗೂ ಕರ್ನಾಟಕ ಸರ್ಕಾರದಲ್ಲಿ ಮಂತ್ರಿಯಾಗಿ ಮಾಡಿದಂತಹ ಸೇವೆಯನ್ನು ವಿಶ್ಲೇಷಿಸಲಾಗಿದೆ. ಐದನೇ ಅಧ್ಯಾಯವು ದಲಿತರ ಅಭಿವೃದ್ಧಿಗಾಗಿ

ಕೈಗೊಂಡ ಸುಧಾರಣಾ ಕ್ರಮಗಳನ್ನು ಕುರಿತು ಚರ್ಚಿಸಲಾಗಿದೆ. ಆರನೇ ಅಧ್ಯಾಯವು ಸಮಾರೋಪವಾಗಿರುತ್ತದೆ. ಇದು ಅಧ್ಯಯನದಿಂದ ಕಂಡುಕೊಂಡ ಫಲಿತಗಳನ್ನು ಅಭಿವ್ಯಕ್ತಿಸಲಾಗಿದೆ.

**ಇದುವರೆಗಿನ ಅಧ್ಯಯನಗಳ ಸಮೀಕ್ಷೆ**

ಪ್ರಸ್ತುತ ಅಧ್ಯಯನ ವಿಷಯವಾದ ಕರ್ನಾಟಕದ ಪ್ರಥಮ ದಲಿತಮಂತ್ರಿ ಆರ್.ಚನ್ನಿಗರಾಮಯ್ಯ ಅವರ ಜೀವನ ಮತ್ತು ಸಾಧನೆ ಎಂಬ ವಿಷಯಕ್ಕೆ ಸಂಬಂಧಿಸಿದಂತೆ ಸೂರ್ಯನಾಥ ಕಾಮತ್ ಅವರು ಸಂಪಾದಿಸಿರುವ ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು ಎಂಬ ಗ್ರಂಥದಲ್ಲಿ ಆರ್. ಚನ್ನಿಗರಾಮಯ್ಯ ಅವರು ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿದ ಬಗೆಯನ್ನು ತಿಳಿಸಲಾಗಿದೆ.

ಶ್ರೀಮತಿ ಶಾರದ ಶಂಕರ್ ರಚಿಸಿರುವ 'ಮಗಳ ನೆನಪಿನಾಳದಲ್ಲಿ ಆರ್.ಸಿ.' ಎಂಬ ಪುಸ್ತಕದಲ್ಲಿ ಅವರ ಬಾಲ್ಯ ಶಿಕ್ಷಣ, ರಾಜಕೀಯ ಪ್ರವೇಶ ಮುಂತಾದ ವಿಷಯಗಳನ್ನು ತಿಳಿಸಿಕೊಟ್ಟಿದ್ದಾರೆ.

'ಕಲ್ಪಸಿರಿ' (ಅಖಿಲ ಭಾರತ ೬೯ನೇ ಕನ್ನಡ ಸಾಹಿತ್ಯ ಸಮ್ಮೇಳನ, ತುಮಕೂರು ಸ್ಮರಣ ಸಂಚಿಕೆ) ಎಂಬ ಡಾ.ಬಿ.ನಂಜುಂಡಸ್ವಾಮಿ ಸಂಪಾದನೆಯ ಕೃತಿಯಲ್ಲಿ ಇವರ ರಾಜಕೀಯ ಜೀವನಕ್ಕೆ ತೊಡಗಿಸಿಕೊಂಡ ಬಗ್ಗೆ ವಿವರಣೆಯಿದೆ. ಎಸ್.ನಾಗರತ್ನಮ್ಮ ಅವರು ರಚಿಸಿರುವ ಕೃತಿ ತುಮಕೂರು ಜಿಲ್ಲೆಯ ಸ್ವಾತಂತ್ರ್ಯ ಚಳುವಳಿಯಲ್ಲಿ ಚನ್ನಿಗರಾಮಯ್ಯ ಅವರ ಸಾಮಾಜಿಕ ಹೋರಾಟಗಳ ಬಗ್ಗೆ ತಿಳಿಸಿಕೊಟ್ಟಿದ್ದಾರೆ.

ಅಧ್ಯಾಯ - ಎರಡು

# ಆರ್.ಚನ್ನಿಗರಾಮಯ್ಯ ಅವರ ಜೀವನ ಪರಿಚಯ

೨.೧. ಬಾಲ್ಯ, ಶಿಕ್ಷಣ ಹಾಗೂ ಪ್ರಭಾವ ಬೀರಿದ ಘಟನೆಗಳು

೨.೨. ಚನ್ನಿಗರಾಮಯ್ಯ ಅವರ ಕೌಟುಂಬಿಕ ಜೀವನ

೨.೩. ಚನ್ನಿಗರಾಮಯ್ಯ ಅವರ ಮೇಲೆ ಸೈದ್ಧಾಂತಿಕ ಪ್ರಭಾವ

ಅಧ್ಯಾಯ - ಎರಡು

## ಆರ್.ಚನ್ನಿಗರಾಮಯ್ಯ ಅವರ ಜೀವನ ಪರಿಚಯ

ಮಾನವನ ಹುಟ್ಟು ಆಕಸ್ಮಿಕ ಎಂಬ ಮಾತೊಂದಿದೆ. ಹುಟ್ಟಿನಿಂದ ಒಬ್ಬ ಮಾನವ ಮೇಲು, ಮತ್ತೊಬ್ಬ ಕೀಳು ಎಂಬುದು ಅತ್ಯಂತ ಅಮಾನವೀಯವಾದ ನಿಯಮ. ಹಿಂದೂ ಸಾಮಾಜಿಕ ವ್ಯವಸ್ಥೆಯಲ್ಲಿ ಹುಟ್ಟಿನ ಆಧಾರದಿಂದ ವಿಭಜನೆಯಾಗಿ ಇಡೀ ಸಮಾಜದ ಪ್ರಗತಿಗೆ ಮಾರಕವಾಗುವುದನ್ನು ನಮ್ಮ ಇತಿಹಾಸದಿಂದ ತಿಳಿಯಬಹುದಾಗಿದೆ. ಆದಿಕಾಲದ ಮಾನವರು ನಾಗರಿಕ ಬದುಕಿಗೆ ಬರುವ ಸಂದರ್ಭದಲ್ಲಿ ಹಲವು ಮಾರ್ಪಾಡುಗಳಾಗಿ, ತಮ್ಮ ಅನುಕೂಲಕ್ಕಾಗಿ ಹಲವು ವ್ಯಾಖ್ಯಾನಗಳನ್ನು ಕಟ್ಟಿಕೊಂಡರು. ಅವು ಜಡವಾಗಿ, ಮೂಢನಂಬಿಕೆಗಳಾಗಿ ಮಾನವರು ತನ್ನ ಸ್ವಾರ್ಥಕ್ಕೆ, ಸುಖಲೋಲಪತೆಗೆ ನೂರಾರು ಕಟ್ಟುಪಾಡುಗಳನ್ನು ವಿಧಿಸಿಕೊಂಡರು. ಇದು ಜಗತ್ತಿನ ಎಲ್ಲಾ ನಾಗರಿಕತೆಗಳಲ್ಲಿ ಸಾಧ್ಯವಾಗಿದೆ ಎಂದರೆ ತಪ್ಪಾಗದು.

ಇಂಥ ಮೌಢ್ಯ ಹಾಗೂ ಶೋಷಣೆಯನ್ನು ಸುಧಾರಿಸಲು ಕಾಲಕಾಲಕ್ಕೆ ಹಲವು ಸುಧಾರಕರು ಜನಿಸಿದ್ದಾರೆ. ತಮ್ಮ ಚಿಂತನೆಗಳನ್ನು ಮಂಡಿಸಿ ಜನರ ಉದ್ಧಾರಕ್ಕೆ ಶ್ರಮಿಸಿದ್ದಾರೆ. ಭಾರತದ ಚರಿತ್ರೆಯಲ್ಲಿ ಇಂಥ ಸುಧಾರಕರು, ಕ್ರಾಂತಿಕಾರಿಗಳು ಹಲವರು. ಇವರಲ್ಲಿ ಬುದ್ಧ, ಬಸವ, ಜ್ಯೋತಿಬಾ ಫುಲೆ, ನಾರಾಯಣಗುರು, ಪೆರಿಯಾರ್, ಸ್ವಾಮಿವಿವೇಕಾನಂದ, ಹರಿದಾಸರು, ಡಾ.ಬಿ.ಆರ್.ಅಂಬೇಡ್ಕರ್ ಮುಂತಾದವರು ಪ್ರಮುಖರಾಗಿದ್ದಾರೆ. ಈ ಹಂತದಲ್ಲಿ ಬುದ್ಧನ ಆದರ್ಶಪರತೆ, ಬಸವನ ಕಾರ್ಯತತ್ಪರತೆ, ಅಂಬೇಡ್ಕರ್ ಅವರ ಅಹಿಂಸಾತ್ಮಕವಾದ ಪ್ರಬಲ ಪ್ರತಿಭಟನಾತ್ಮಕ ಜನ ಹೋರಾಟಗಳು ಅಪೂರ್ವವಾದವು.[೧]

ವರ್ಣವ್ಯವಸ್ಥೆ ತನ್ನ ಬಿಗಿಮುಷ್ಟಿಯಲ್ಲಿ ಇಂದು ದಲಿತ ಜನರನ್ನು ಸಿಕ್ಕಿಸಿಕೊಂಡು, ತನ್ನ ಬಾಹುಗಳನ್ನು ಚಾಚುತ್ತಿರುವ ಸಮಾಜ ಒಂದರ್ಥದಲ್ಲಿ ಜಡ್ಡುಗಟ್ಟಿ ಹೋಯಿತು. ಭಾರತೀಯ ಹಿಂದೂ ಸಮಾಜ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂದು ಸೃಷ್ಟಿಗೊಂಡು, ಅವೇ ಮುಂದೆ ಜಾತಿಗಳಾಗಿ ಬಿಗಿ ಹಾಗೂ ಕಟ್ಟುಪಾಡುಗಳಾಗಿ ಬೆಳೆದುಬಂದವು. ವರ್ಣದಿಂದಾಚೆ ಜನಾಂಗವೊಂದು ಉಳಿಯಿತು. ಪಂಚಮವರ್ಗ

ಅಥವಾ ಅಸ್ಪೃಶ್ಯ ಜನಾಂಗವೊಂದು ಭಾರತೀಯ ಸಮಾಜದ ಶ್ರೇಣಿಯಲ್ಲಿ ಕಟ್ಟಕಡೆಯ ಹಂತವಾಯಿತು. ಅಂಬೇಡ್ಕರ್ ಈ ಸಮಾಜದ ನಿರ್ಲಕ್ಷ್ಯಕ್ಕೊಳಗಾದ ಅಸ್ಪೃಶ್ಯ ಜನಾಂಗದಲ್ಲಿ ಹುಟ್ಟಿದ್ದರಿಂದಲೇ ಅವರ ಕಷ್ಟಗಳಿಗೆ ದನಿಯಾದರು. ಆ ಜನಾಂಗಕ್ಕೆ ಬಾಯಿಯಾದರು. ನಿಜವಾದ ಭಾರತದ ಚರಿತ್ರೆಗೆ ಮುನ್ನುಡಿ ಬರೆದರು. ಮೂಕ ಮಾನವ ಕುಲದ ಮಾತಿನ ಸಂಕೇತವಾದರು. ಎಲ್ಲಕ್ಕಿಂತಲೂ ಹೆಚ್ಚಾಗಿ ಹಿಂದೂ ಸಮಾಜದ ಪ್ರತಿಭಟನೆಯ ಕಿಡಿಯಾದರು. ಆದರೆ ಇಂದಿಗೂ ಈ ವರ್ಣವ್ಯವಸ್ಥೆ ಜಾರಿಯಲ್ಲಿದ್ದು, ಅಸ್ಪೃಶ್ಯತೆ ಜಾರಿಯಲ್ಲಿದ್ದರೂ ನಮ್ಮ ದಲಿತ ಸಂಘಟನೆಗಳು ಅಂಬೇಡ್ಕರ್ ಆದರ್ಶಗಳನ್ನು ಮರೆತು ಸ್ವಾರ್ಥ ಕೆಲಸಗಳಲ್ಲಿ ತೊಡಗಿ ತಮ್ಮ ಅಸ್ತಿತ್ವವನ್ನು ಉಳಿಗಮಾನ್ಯ ಶಾಹಿಗಳು ಹಾಗೂ ಬಂಡವಾಳಶಾಹಿತ್ವದ ರಾಜಕಾರಣಿಗಳಿಗೆ ಮಾರಿಕೊಂಡು ಸತ್ಯಕ್ಕೆ ಮಂಗಳ ಹಾಡುತ್ತಿದ್ದಾರೆ. ಅಸ್ಪೃಶ್ಯತೆ ಮತ್ತು ವರ್ಣಭೇದಗಳು ಪ್ರಪಂಚದ ಎರಡು ಅಮಾನವೀಯ ಕ್ರೌರ್ಯಗಳು. ಇವುಗಳ ವಿರುದ್ಧದ ಹೋರಾಟ ಮಾನವೀಯತೆ ಪರವಾದ ಹೋರಾಟವಾಗಿದೆ. ಭಾರತದಲ್ಲಿ ಇಂತಹ ಹೋರಾಟದ ಮುಂಚೂಣಿಯಲ್ಲಿದ್ದ ಅಂಬೇಡ್ಕರ್ ಅಸ್ಪೃಶ್ಯರಾಗಿ ಜನಿಸಿ, ಸ್ವಪ್ರಯತ್ನದಿಂದ ಜ್ಞಾನನಿಧಿಯಾಗಿ, ವಿದ್ವಾಂಸರಾಗಿ ವಿದ್ವತ್ಪೂರ್ಣ ಲೇಖನ ಬರಹಗಳಿಂದ ಹಿಂದೂ ಸಮಾಜದ ಅಸಮಾನತೆಯ ವಿರುದ್ಧ ಅಹಿಂಸಾತ್ಮಕ ಪ್ರತಿಭಟನಾತ್ಮಕ ಚಳುವಳಿಗಳನ್ನು ಸಂಘಟಿಸಿದರು. ಚಳುವಳಿಗೆ ಪೂರಕವಾದ ಪತ್ರಿಕೆಗಳನ್ನು ಸಿದ್ಧಾಂತಗಳನ್ನು ತಮ್ಮ ಅಧ್ಯಯನಗಳಿಂದ ರೂಢಿಸಿ ಹರಿತವಾದ ವಿಮರ್ಶೆಯಿಂದ ಸಮಕಾಲೀನರನ್ನು ದಂಗುಬಡಿಸಿದರು. ಭಾರತದ ಸ್ವಾತಂತ್ರ್ಯ ಚಳವಳಿಯ ಜೊತೆಯಲ್ಲೇ ದಲಿತರ ವಿಮೋಚನೆಯ ಕನಸು ಕಂಡರು. ಸ್ವಾತಂತ್ರ್ಯ ಚಳವಳಿಯ ಮುಖ್ಯ ಘಟನೆಯಾದ ದುಂಡು ಮೇಜಿನ ಪರಿಷತ್ತಿನಲ್ಲಿ ಭಾಗವಹಿಸಿ ಸರ್ವರಿಗೂ ಸಾಮಾಜಿಕ ನ್ಯಾಯ ಒದಗಿಸಲು ತಮ್ಮದೇ ವಿಚಾರಗಳನ್ನು ಮಂಡಿಸಿ ಬ್ರಿಟಿಷರನ್ನು ಬೆರಗುಗೊಳಿಸಿದರು. ಸಾಂಪ್ರದಾಯಿಕ ಭಾರತೀಯರನ್ನು ಎಚ್ಚರಗೊಳಿಸಿದರು.[೨]

ಭಾರತೀಯ ಸಮಾಜದಲ್ಲಿ ಇಂತಹ ಎಚ್ಚರಗೊಳಿಸುವ ಹೋರಾಟಗಳು ಇಂದಿಗೂ ಪ್ರಸ್ತುತವಾಗಿದೆ. ಅಂದಿನ ಸಾಮಾಜಿಕ ಪಿಡುಗುಗಳಾದ ಜಾತಿಪದ್ಧತಿ, ಅಸ್ಪೃಶ್ಯತೆ, ಶೋಷಣೆ, ಬಡತನ, ನಿರುದ್ಯೋಗ, ಇಂದಿಗೂ ಭಾರತದ ಬಹುದೊಡ್ಡ ಸಮಸ್ಯೆಗಳಾಗಿವೆ. ಅಸ್ಪೃಶ್ಯತೆ ರೂಪಾಂತರ ಹೊಂದುತ್ತಾ ಅಂತರ್ಮುಖವಾಗುತ್ತಿದೆ. ಜಾತಿ ಸರ್ಪ ರಂಗದಲ್ಲಿ ತನ್ನ ಕರಾಳ ಹಸ್ತಗಳನ್ನು ಚಾಚಿದೆ. ಮಾನವ ಕೇಂದ್ರಿತವಾಗಬೇಕಾದ ಚಿಂತನೆಗಳು ಜಾತಿ ಧರ್ಮ ಕೇಂದ್ರವಾಗುತ್ತಿವೆ. ಧರ್ಮ ವಿನಾಶದ ಅಂಚಿನಲ್ಲಿದೆ. ಧರ್ಮದ ಹೆಸರಿನಲ್ಲಿ ಪ್ರಜಾಪ್ರಭುತ್ವ ಬೆಳೆಯುತ್ತಿದೆ. ಇದನ್ನ ಜಾತ್ಯತೀತತೆಯ ಉನ್ನತ ಮೌಲ್ಯವೆಂಬಂತೆ ಬಿಂಬಿಸಲಾಗುತ್ತಿದೆ. ಸ್ವಾತಂತ್ರ್ಯ, ಸಮಾನತೆ, ಭ್ರಾತೃತ್ವಗಳ ಮೂಲಕ ಬೆಳೆಯಬೇಕಾದ ಪ್ರಜಾಪ್ರಭುತ್ವ ವ್ಯವಸ್ಥೆ ಹುಸಿಗೊಳ್ಳುತ್ತದೆ. ಹೀಗಾಗಿ ದಲಿತರು ತಮ್ಮ ಸಾಂವಿಧಾನಿಕ ಹಕ್ಕುಗಳಿಗಾಗಿ ಹೋರಾಟ ಮಾಡುವುದು ಇಂದು ಕೂಡ ಪ್ರಸ್ತುತವೆನಿಸುತ್ತದೆ. ಇಂದಿನ ದಲಿತರು ಈ ಹೋರಾಟದ ಪರಿಸ್ಥಿತಿಯನ್ನು ಮರೆತು ಬೂಟಾಟಿಕೆಯ ಹೋರಾಟಕ್ಕೆ ಹೊರಟಿರುವುದು ಇಂದಿನ ಸಮಾಜದ ಅಧೋಗತಿಗೆ ಕಾರಣವಾಗಿದೆ. ಅಂಬೇಡ್ಕರ್ ಅವರನ್ನು

ಇವರು ಕೇವಲ ಸರಕಾಗಿ ಬಳಸಿಕೊಳ್ಳುತ್ತಿರುವುದು ಈ ರಾಷ್ಟ್ರದ ಪ್ರತಿಯೊಬ್ಬ ಸಾಮಾಜಿಕ ಪ್ರಜ್ಞಾವಂತರನ್ನೇ ಮುಖಾಮುಖಿ ಮಾಡುವಂತೆ ಮಾಡಿದೆ.[೬] ಇಂತಹ ಸಂದಿಗ್ಧ ಮತ್ತು ಸವಾಲಿನ ಪರಿಸ್ಥಿತಿಯಲ್ಲಿ ಆರ್.ಚನ್ನಿಗರಾಮಯ್ಯನವರು ಜನಿಸುತ್ತಾರೆ. ಇವರು ನಮ್ಮ ನಾಡು ಕಂಡ ಅಪರೂಪದ ಸಮಾಜಮುಖಿ ವ್ಯಕ್ತಿ. ಅವರು ಕೇವಲ ಒಬ್ಬ ರಾಜಕಾರಣಿಯಾಗಿರಲಿಲ್ಲ. ಅವರೊಬ್ಬ ಸಮಾಜ ಚಿಂತಕರಾಗಿದ್ದರು. ಆ ಚಿಂತನೆಗಳನ್ನು ಅನುಷ್ಠಾನಕ್ಕೆ ತರುವ ಮೂಲಕ ನುಡಿದಂತೆ ನಡೆದ ಒಬ್ಬ ಧೀಮಂತರೂ ಹೌದು. ಗ್ರಾಮೀಣ ಜನತೆಯ ಶ್ರಮ ಮತ್ತು ಸಂಸ್ಕೃತಿಯ ಪ್ರತೀಕದಂತೆ ಇದ್ದರು ಆರ್.ಚನ್ನಿಗರಾಮಯ್ಯನವರು.

### ೨.೧. ಬಾಲ್ಯ ಶಿಕ್ಷಣ ಹಾಗೂ ಪ್ರಭಾವ ಬೀರಿದ ಘಟನೆಗಳು

ಕರ್ನಾಟಕದ ಒಬ್ಬ ಅಪರೂಪದ ರಾಜಕೀಯ ಚಿಂತಕ. ಬದುಕಿರುವಷ್ಟು ದಿನ ಪ್ರಾಮಾಣಿಕತೆ, ಸರಳತೆ ಮತ್ತು ಪರಿಶುದ್ಧತೆಯನ್ನು ಕಾಪಾಡಿಕೊಂಡಿದ್ದಲ್ಲದೇ, ರಾಜಕಾರಣವನ್ನು ಸಮಾಜದ ಒಳಿತಿಗಾಗಿ ಬಳಸಿದ ಒಳ್ಳೆಯ ಆಡಳಿತಗಾರ.[೭] ಇಂತಹ ಆರ್.ಚನಿಗರಾಮಯ್ಯ ಅವರು ತುಮಕೂರು ಜಿಲ್ಲೆಯ ಕೊರಟಗೆರೆ ಟೌನ್‌ನಲ್ಲಿ ಜೂನ್ ೪, ೧೯೧೧ರಂದು ಸಾಮಾನ್ಯ ದಲಿತ ಕುಟುಂಬದಲ್ಲಿ ತಂದೆಗೆ ಏಕಮಾತ್ರ ಪುತ್ರರಾಗಿ ಜನಿಸಿದರು. ಇವರ ತಂದೆ ರಾಮಹನುಮಯ್ಯನವರು ನಿವೃತ್ತ ಸ್ಕೂಲ್ ಮಾಸ್ಟರ್ ಹಾಗೂ ತಾಲ್ಲೂಕಿನ ಆದಿ ಕರ್ನಾಟಕದ ಜನಾಂಗದ ಯಜಮಾನರಾಗಿದ್ದರು. ಚನ್ನಿಗರಾಮಯ್ಯನವರು ಪ್ರಾಥಮಿಕ ವಿದ್ಯಾಭ್ಯಾಸವನ್ನು ಸ್ವಂತ ಊರಿನಲ್ಲಿ ಮುಗಿಸಿ ಕೆಲಕಾಲ ವ್ಯವಸಾಯವನ್ನು ಮಾಡಿ ೧೯೨೯ರಲ್ಲಿ ಬೆಂಗಳೂರಿಗೆ ಬಂದು ಕೋಟೆ ಪ್ರೌಢಶಾಲೆಗೆ ಸೇರಿ ಶ್ರೀ ನರಸಿಂಹರಾಜ ಹಾಸ್ಟೆಲ್ ವಿದ್ಯಾರ್ಥಿಯಾಗಿ ೧೯೩೧ರಲ್ಲಿ ಎಸ್.ಎಸ್.ಎಲ್.ಸಿಯವರೆಗೆ ಓದಿದರು. ಅಲ್ಲಿಗೆ ಅವರ ಶಾಲಾ ವಿದ್ಯಾಭ್ಯಾಸ ಮುಗಿಯಿತು. ಮುಂದೆ ಆರ್ಥಿಕ ಸಂಕಷ್ಟಗಳಿಂದಾಗಿ ಉನ್ನತ ಶಿಕ್ಷಣ ದೊರೆಯದಾಯಿತು. ಅವರು ಶಿಕ್ಷಣವನ್ನು ಪಡೆದಿದ್ದು ಕಡಿಮೆ. ಆದರೂ ಅನುಭವ, ಸೇವಾನಿಷ್ಠೆ, ದೇಶಪ್ರೇಮ ಅವರಿಗೆ ಅಪಾರಜ್ಞಾನವನ್ನು ಹಾಗೂ ಲೋಕಾನುಭವವನ್ನು ಕೊಟ್ಟಿದ್ದವು. ಇವರ ತಂದೆಯವರು ಸ್ವತಃ ಶಿಕ್ಷಕರಾಗಿದ್ದರಿಂದ ಅವರು ಮಾರ್ಗದರ್ಶನದಂತೆ ಬಾಲ್ಯದಲ್ಲೇ ಒಳ್ಳೆಯತನವನ್ನು, ಸುಸಂಸ್ಕೃತಿಯನ್ನು ಮೈಗೂಡಿಸಿಕೊಂಡು ಚನ್ನಿಗರಾಮಯ್ಯನವರು ಬೆಳೆದರು. ಅದೇ ವರ್ಷ ಮೈಸೂರು ರಾಜ್ಯ ಜನಗಣತಿ ಇಲಾಖೆಯಲ್ಲಿ ಕೇವಲ ಮೂರು ತಿಂಗಳ ಕಾಲ ಗುಮಾಸ್ತರಾಗಿ ಸೇವೆ ಸಲ್ಲಿಸಿದರು. ಆಗ ದೇಶದ ಸ್ವಾತಂತ್ರ್ಯ ಸಾಧನೆಯ ಆಂದೋಲನದ ಪರ್ವಕಾಲ. ರಾಷ್ಟ್ರಪಿತ ಗಾಂಧೀಜಿಯವರು ಭಾರತ ರಾಷ್ಟ್ರೀಯ ಕಾಂಗ್ರೆಸ್‌ನ ಏಕಮೇವ ನಾಯಕತ್ವವನ್ನು ಪಡೆದು ರಾಷ್ಟ್ರೀಯ ಚಳವಳಿಯಲ್ಲಿ ರಚನಾತ್ಮಕ ಕಾರ್ಯಕ್ರಮಗಳ ಮೂಲಕ ತಮ್ಮ ಧ್ಯೇಯವನ್ನು ಸಾಧಿಸಿದ್ದರು. ಗಾಂಧೀಜಿಯವರ ಸ್ವಾತಂತ್ರ್ಯದ ರಣಕಹಳೆ ಅವರ ಸತ್ಯಾಗ್ರಹದ ಚಳವಳಿಗಳು ಹಾಗೂ ಅಂಬೇಡ್ಕರ್ ಅವರು ಅಸ್ಪೃಶ್ಯತೆಯ ನಿವಾರಣೆಗಾಗಿ ನಡೆಸಿದ ಹೋರಾಟಗಳಿಂದ ಪ್ರಭಾವಿತರಾಗಿ ಮತ್ತು ದೇಶಭಕ್ತಿ ದಲಿತರ ಸಂಕಷ್ಟಗಳೂ ಚನ್ನಿಗರಾಮಯ್ಯನವರ ಮೇಲೆ ಪ್ರಭಾವ ಬೀರಿದವು. ಆಗ ಅವರು ಕೆಲಸಕ್ಕೆ ರಾಜೀನಾಮೆ ಕೊಟ್ಟು ತಮ್ಮ ಊರಿಗೆ ಹಿಂತಿರುಗಿ ರಾಷ್ಟ್ರೀಯ ಚಳುವಳಿಗೆ ಇಳಿದು ಸರ್ವೋದಯವನ್ನು ಉಂಟು ಮಾಡಿದರು.[೮] ಚನ್ನಿಗರಾಮಯ್ಯನವರು ಮೊದಲಿಗೆ ೧೯೩೨ರಲ್ಲಿ

ಕೊರಟಗೆರೆ ಪುರಸಭೆ ಮತ್ತು ತುಮಕೂರು ಜಿಲ್ಲಾ ಬೋರ್ಡಿನ ಸದಸ್ಯರಾದರು. ೧೯೩೪ರಲ್ಲಿ ಬೆಂಗಳೂರಿನ ಮಾಗಡಿ ರಸ್ತೆಯಲ್ಲಿ ಬಾಪೂಜಿ ವಿದ್ಯಾರ್ಥಿನಿಲಯದ ಶಂಕುಸ್ಥಾಪನೆಯನ್ನೇ ಮಹಾತ್ಮಗಾಂಧೀಜಿಯವರ ಅಮೃತ ಹಸ್ತದಿಂದ ನೆರವೇರಿಸಿದರು. ಇವರು ೧೯೩೬ರಲ್ಲಿ ಮೈಸೂರು ಹರಿಜನ ಸೇವಕ ಸಂಘದ ಪ್ರತಿನಿಧಿಯಾಗಿ ದೆಹಲಿಗೆ ಮತ್ತು ಕಲ್ಕತ್ತಕ್ಕೆ ತೆರಳಿ ಬಾಪೂಜಿಯವರನ್ನು ಮತ್ತು ಕಾಂಗ್ರೆಸ್ ನಾಯಕರನ್ನು ಭೇಟಿ ಮಾಡಿ Joint electorate with Reservation of seats to Harijans ತತ್ವಕ್ಕೆ ಬೆಂಬಲ ಸೂಚಿಸಿ ಗಾಂಧೀಜಿಯವರ ಮೆಚ್ಚುಗೆಗೆ ಪಾತ್ರರಾದರು. ೧೯೩೭ರ ಸುಮಾರಿನಲ್ಲಿ ಮೈಸೂರು ಪ್ರಜಾಪ್ರತಿನಿಧಿಯ ಸಭೆಯ ಸದಸ್ಯರಾಗಿ, ೧೯೪೧ರಲ್ಲಿ ಲೆಜಿಸ್ಲೇಟಿವ್ ಕೌನ್ಸಿಲ್‌ನ ಸದಸ್ಯರಾಗಿ ನೇಮಕವಾದರು ಅವರನ್ನು ೧೯೩೮-೪೦ರಲ್ಲಿ ಮೈಸೂರು ಸುಧಾರಣಾ ಸಮಿತಿ, ಡಿಲಿಮಿಟೇಷನ್ ಸಮಿತಿ ಸದಸ್ಯರನ್ನಾಗಿ ನಿಮ್ನ ವರ್ಗದ ಪರವಾಗಿ ಆರಿಸಿಕೊಳ್ಳಲಾಯಿತು. ಮೈಸೂರು ರಾಜ್ಯ ಆದಿಜಾಂಬವಾಭಿವೃದ್ಧಿ ಸಂಘವನ್ನು ಸ್ಥಾಪಿಸಿ ದಲಿತರ ಅಭಿವೃದ್ಧಿಗಾಗಿ ಶ್ರಮಿಸಿದರು.[೬] ಕರ್ನಾಟಕ ರಾಜ್ಯದ ಮೊಟ್ಟ ಮೊದಲ ಮುಖ್ಯಮಂತ್ರಿ ಕೆ.ಸಿ.ರೆಡ್ಡಿಯವರ ಸಂಪುಟದ ಏಳು ಮಂದಿ ಮಂತ್ರಿಗಳಲ್ಲಿ ಕ್ಯಾಬಿನೆಟ್ ದರ್ಜೆಯ ಪ್ರಥಮ ದಲಿತ ಮಂತ್ರಿಗಳಾಗಿ ಕಾರ್ಯ ನಿರ್ವಹಿಸಿದರು. ಸ್ಥಳೀಯ ಸಂಸ್ಥೆಗಳು, ಅರಣ್ಯ ಖಾತೆ ಮತ್ತು ಸಮಾಜ ಕಲ್ಯಾಣ, ಶಿಕ್ಷಣ ಖಾತೆ ಸಚಿವರಾಗಿ ಶ್ರೀಯುತರು ಪ್ರಾಮಾಣಿಕತೆಯಿಂದಲೂ, ದಕ್ಷತೆಯಿಂದಲೂ ನಿಷ್ಠೆಯಿಂದ ಯಾರ ಮನ ನೋಯಿಸದೇ ದಾಕ್ಷಿಣ್ಯಕ್ಕೆ ಒಳಗಾಗದೆ ಮಂತ್ರಿಗಳಾಗಿ ಗಣನೀಯ ಸೇವೆ ಸಲ್ಲಿಸಿ ಎಲ್ಲರ ಮೆಚ್ಚುಗೆಗೆ ಪಾತ್ರರಾಗಿದ್ದರು. ೧೯೫೪ರಲ್ಲಿ ಮುಖ್ಯಮಂತ್ರಿಗಳಾಗಿದ್ದ ಕೆಂಗಲ್ ಹನುಮಂತಯ್ಯನವರ ಸಂಪುಟದಲ್ಲಿ ಡೆಪ್ಯೂಟಿ ಸ್ಪೀಕರ್ ಆಗಿ ಕೆಲವು ದಿನಗಳ ಕಾಲ ಕಾರ್ಯ ನಿರ್ವಹಿಸಿದರು. ನಂತರ ೧೯೫೬ರಲ್ಲಿ ಮುಖ್ಯ ಮಂತ್ರಿಗಳಾಗಿದ್ದ ಶ್ರೀ ಎಸ್.ನಿಜಲಿಂಗಪ್ಪನವರ ಸಚಿವ ಸಂಪುಟದಲ್ಲಿ ಕ್ಯಾಬಿನೆಟ್ ದರ್ಜೆಯ ಸಚಿವರಾಗಿ ಮತ್ತೊಮ್ಮೆ ಸೇವೆ ಸಲ್ಲಿಸಿದರು.[೭] ಚನ್ನಿಗರಾಮಯ್ಯ ಅವರನ್ನು ಸ್ವಲ್ಪದಿನದ ನಂತರ ಮಂತ್ರಿಪದವಿಯಿಂದ ತೆಗೆದು ಹಾಕಿದರು. ಈ ಬಗ್ಗೆ ಇವರ ತಂದೆ ರಾಮಹನುಮಯ್ಯನವರು ನಿಜಲಿಂಗಪ್ಪನವರ ಹತ್ತಿರ ಮಾತನಾಡಿದರು. ನನ್ನ ಮಗನಿಂದ ಯಾವ ತಪ್ಪು ಅಥವಾ ಅಪರಾಧವಾಗಿದೆ ಎಂದು ಕೇಳಿದರಂತೆ.[೮] ಮನೆಯಲ್ಲಿ ಚಿಕ್ಕಮಕ್ಕಳು, ಮನೆ ತುಂಬಾ ೧೫-೨೦ ಜನ ಇರುವಂತಹ ಕುಟುಂಬ, ಮನೆಗೆ ಇವನೊಬ್ಬನೇ ಆಧಾರಸ್ತಂಭ, ನ್ಯಾಯ ರೀತಿಯಲ್ಲಿ ಬಾಳಿದವನು ಎಂದು ಹೇಳಿದರಂತೆ. ಅದಕ್ಕೆ ಮುಖ್ಯಮಂತ್ರಿಗಳು "ಯಜಮಾನರೇ ನೀವು ತಪ್ಪು ತಿಳಿದುಕೊಂಡಿದ್ದಿರ. ಅವರಿಗೆ ಇನ್ನು ಹೆಚ್ಚಿನ ಜವಾಬ್ದಾರಿ ಮತ್ತು ಉನ್ನತ ಜಾಗ ಕಾದಿರಿಸಿದ್ದೇನೆ. ಬೇಜಾರು ಮಾಡಿಕೊಳ್ಳಬೇಡಿ, Mysore Public Service Commissionನ ಅಧ್ಯಕ್ಷರನ್ನಾಗಿ ನೇಮಿಸಲಾಗಿದೆ. ಏಕೆಂದರೆ ಅಲ್ಲಿರುವಂತಹ ವ್ಯವಸ್ಥೆ ಸರಿಪಡಿಸಬೇಕಾಗಿದೆ. ಅಲ್ಲಿಯ ಜಾಗಕ್ಕೆ ಒಬ್ಬ ಒಳ್ಳೆಯ, ನಿಷ್ಠಾವಂತ, ನ್ಯಾಯವಂತರು ಬೇಕು ಎಂದು ಈ ರೀತಿ ಮಾಡಿದೆ" ಎಂದು ಹೇಳಿದರು. ಇದು ಚನ್ನಿಗರಾಮಯ್ಯನವರಲ್ಲಿ ಇಟ್ಟಿದ್ದ ನಂಬಿಕೆ, ನಿಷ್ಠೆ, ಪ್ರಾಮಾಣಿಕತೆಯನ್ನು ತೋರಿಸುತ್ತದೆ.[೯] ಚನ್ನಿಗರಾಮಯ್ಯನವರು ಮಂತ್ರಿಯಾದ ನಂತರ ಹಲವಾರು ಸಾಮಾಜಿಕ ಕಾರ್ಯಗಳನ್ನು ಕೈಗೊಂಡರು. ಕೊರಟಗೆರೆ ಟೌನ್‌ಗೆ ಮೊಟ್ಟ ಮೊದಲಿಗೆ

ವಿದ್ಯುತ್ ಶಕ್ತಿ ಸರಬರಾಜು ಮಾಡಿಸಿದರು. ಕುಡಿಯುವ ನೀರಿನ ಸೌಲಭ್ಯವನ್ನು ಮುನಿಸಿಪಾಲಿಟಿ ಮುಖಾಂತರ ಮಾಡಿಸಿದರು. ಶಿಕ್ಷಣದ ಬಗ್ಗೆ ಅಗಾಧವಾದ ಕಾಳಜಿಯನ್ನು ಹೊಂದಿದ್ದ ಚನ್ನಿಗರಾಮಯ್ಯ ಅವರು ಎಲ್ಲಾ ವರ್ಗದವರು ಶಿಕ್ಷಣವನ್ನು ಪಡೆಯುವ ಉದ್ದೇಶದಿಂದ ೧೯೬೫ರಂದು ಕೊರಟಗೆರೆಯಲ್ಲಿ ಸರ್ಕಾರಿ ಹೈಸ್ಕೂಲ್ ಮಂಜೂರು ಮಾಡಿಸಿ ಕಟ್ಟಡದ ಶಂಕುಸ್ಥಾಪನೆಯನ್ನು ನೆರವೇರಿಸಿ ಆ ಶಾಲೆಯ ಅಭಿವೃದ್ಧಿಗಾಗಿ ಶ್ರಮಿಸಿದರು. ನಂತರದ ದಿನಗಳಲ್ಲಿ ಸರ್ಕಾರಿ ಪದವಿಪೂರ್ವ ಕಾಲೇಜನ್ನು ಮಂಜೂರು ಮಾಡಿಸಿದರು.[೧೦]

ಚನ್ನಿಗರಾಮಯ್ಯನವರು ಅನೇಕ ಸಂಘ ಸಂಸ್ಥೆಗಳ ಸ್ಥಾಪಕ ಸದಸ್ಯರಾಗಿ ದುಡಿದರು. ಅವುಗಳಲ್ಲಿ ಮೈಸೂರು ರಾಜ್ಯ ಆದಿ ಜಾಂಬವ ಅಭಿವೃದ್ಧಿ ಸಂಘ, ಬೆಂಗಳೂರು ಬಾಪೂಜಿ ವಿದ್ಯಾರ್ಥಿ ನಿಲಯ ಸಂಘ, ಬೆಂಗಳೂರು ಆದಿ ಜಾಂಬವ ಹರಿಜನ ವಿದ್ಯಾಭಿವೃದ್ಧಿ ಟ್ರಸ್ಟ್, ಬೆಂಗಳೂರು, ಮೈಸೂರು ರಾಜ್ಯ ಹರಿಜನ ಸೇವಕ ಸಂಘ ಮತ್ತು ಶ್ರೀ ಬಸವ ಸಮಿತಿ ಮುಖ್ಯವಾದವು. ಶ್ರೀ ಬಿ.ಡಿ.ಜತ್ತಿಯವರು ಅಧ್ಯಕ್ಷರಾಗಿದ್ದ ಶ್ರೀ ಬಸವ ಸಮಿತಿಗೆ ಉಪಾಧ್ಯಕ್ಷರಾಗಿ ಕಾರ್ಯ ನಿರ್ವಹಿಸಿದರು.[೧೧] ದೀನ ದಲಿತರ ಬಗ್ಗೆ ಅಪಾರವಾದ ಕಾಳಜಿಯನ್ನು ಹೊಂದಿದ್ದ ಚನ್ನಿಗರಾಮಯ್ಯ ಅವರ ಅಭಿವೃದ್ಧಿ ಏಳಿಗೆಗಾಗಿ ಸದಾ ಚಿಂತಿಸುತ್ತಿದ್ದರು. ಸಮಾಜದಲ್ಲಿ ಸಾವಿರಾರು ವರ್ಷಗಳಿಂದ ಬೇರೂರಿ ಬಂದಿರುವ ಜಾತಿ, ಮತ, ಸ್ಪೃಶ್ಯ, ಅಸ್ಪೃಶ್ಯವೆಂಬ ಮೇಲು ಕೀಳು ಕಳಂಕವನ್ನು ಹೋಗಲಾಡಿಸಿ ಜಾತ್ಯತೀತ ಸಮಾಜ ಸೃಷ್ಟಿಸಲು ಶ್ರಮಿಸಿದರು. ಸರ್ಕಾರದಿಂದ ದೊರೆಯುವಂತಹ ಎಲ್ಲಾ ರೀತಿಯ ಸವಲತ್ತುಗಳನ್ನು ದೊರಕಿಸಿಕೊಡುವಲ್ಲಿ ಪ್ರಾಮಾಣಿಕ ಪ್ರಯತ್ನ ಮಾಡಿದರು. ಚನ್ನಿಗರಾಮಯ್ಯನವರು ಹೌಸಿಂಗ್ ಬೋರ್ಡ್ ಕಮಿಟಿ ಛೇರ್ಮನ್ ಆಗಿದ್ದ ಸಂದರ್ಭದಲ್ಲಿ ದಲಿತ ಕುಟುಂಬಗಳಿಗೆ ಸರ್ಕಾರದ ವತಿಯಿಂದ ಉಚಿತ ನಿವೇಶನ ಮತ್ತು ಮನೆ ಕಟ್ಟಲು ಅವಶ್ಯವಿರುವ ಸಾಮಗ್ರಿಗಳನ್ನು ಕೊಡಿಸಿದ್ದರು. ಸತತ ಹೋರಾಟ ನಡೆಸಿ ಕೊರಟಗೆರೆಯ ಜಂಪೇನಹಳ್ಳಿ ಕೆರೆಯನ್ನು ನಿರ್ಮಿಸಲು ಸಹಕರಿಸಿದರು. ಇದರಿಂದಾಗಿ ವ್ಯವಸಾಯವನ್ನೇ ನಂಬಿದ್ದ ನೂರಾರು ಕುಟುಂಬಗಳಿಗೆ ಆಧಾರವಾಯಿತು. ದೈವಭಕ್ತರಾದ ಇವರು ವೈಜ್ಞಾನಿಕ ವಿಚಾರವುಳ್ಳವರಾಗಿದ್ದು ಮೂಢನಂಬಿಕೆಗಳನ್ನು ವಿರೋಧಿಸುತ್ತಿದ್ದರು. ಕೊರಟಗೆರೆ ಪಾಳೇಗಾರರಾದ ಶ್ರೀ ರಣಭೈರೇಗೌಡರಿಂದ ಸ್ಥಾಪಿಸಲ್ಪಟ್ಟ ಪುರಾತನ ದೇವಾಲಯವಾದ ಶ್ರೀ ಗುಂಡಾಂಜನೇಯಸ್ವಾಮಿ ದೇವಸ್ಥಾನವು ತುಂಬಾ ಶಿಥಿಲವಾಗಿತ್ತು. ಶ್ರೀಯುತರು ಸಾರ್ವಜನಿಕರಿಂದ ಚಂದಾ ಪಡೆದು ನಲವತ್ತೈದು ಸಾವಿರ ರೂಪಾಯಿಗಳನ್ನು ಖರ್ಚು ಮಾಡಿ ದೇವಾಲಯವನ್ನು ನವೀಕರಿಸಿ ಜೀರ್ಣೋದ್ಧಾರ ಮಾಡಿಸಿ ದೇವಾಲಯದ ಧರ್ಮದರ್ಶಿ ಮಂಡಲದ ಅಧ್ಯಕ್ಷರಾಗಿ ಸೇವೆ ಸಲ್ಲಿಸುತ್ತಾ ಪ್ರತಿ ವರ್ಷ ಶ್ರೀರಾಮನವಮಿ ಉತ್ಸವವನ್ನು ಬಹು ವೈಭವದಿಂದ ನಡೆಸಿಕೊಂಡು ಬರುತ್ತಿದ್ದರು. ಆದರೆ ಆಡಂಬರದ ಆಚರಣೆ ಎಂದಿಗೂ ಇವರು ಇಷ್ಟಪಡುತ್ತಿರಲಿಲ್ಲ.[೧೦] ಇವರು ಮಂತ್ರಿಯಾದ ನಂತರ ದಲಿತರ ಅಭಿವೃದ್ಧಿ, ಉನ್ನತಿಗೆ ಹೆಚ್ಚಿನ ಆಸಕ್ತಿ ನೀಡಿದರು. ದಲಿತ ಮಹಿಳೆಯರು ಸ್ವಾವಲಂಬಿಗಳಾಗಲು, ಗೃಹಕೈಗಾರಿಕೆ, ಸ್ವಯಂ ಉದ್ಯೋಗ, ಕರಕುಶಲಗಳಿಗೆ ಸಂಬಂಧಿಸಿದ ಸಣ್ಣ ಕೈಗಾರಿಕೆಗಳನ್ನು ಮಂಜೂರು ಮಾಡಿದರು. ಅವರ ಆಡಳಿತದ ಅವಧಿಯಲ್ಲಿ ಸ್ವಾರ್ಥಕ್ಕಿಂತ ಸಾಮಾಜಿಕ ನ್ಯಾಯಕ್ಕೆ ಹೆಚ್ಚು ಮಹತ್ವ

ನೀಡಿದ್ದರು. ಆದರಲ್ಲೂ ಅವರು ಅಸ್ಪೃಶ್ಯತೆಯನ್ನು ಬಲವಾಗಿ ಪ್ರತಿಭಟಿಸಿ ಅದರ ನಿವಾರಣೆಗಾಗಿ ಅನೇಕ ಕಾರ್ಯ ಯೋಜನೆಗಳನ್ನು ಜಾರಿಗೆ ತಂದರು. ಅನಿಷ್ಟ ಪದ್ಧತಿಗಳಾದ ಮೂಢನಂಬಿಕೆ ಅಂಧಶ್ರದ್ಧೆಗಳಿಂದ ದೂರ ಇರುವಂತೆ ಸಲಹೆ ನೀಡುತ್ತಿದ್ದರು. ದಲಿತರು ಪ್ರತಿಯೊಂದು ಊರುಗಳ ಹೊರಗಡೆ ವಾಸಿಸುತ್ತಾ, ಎಲ್ಲಾ ವಿಧಗಳಲ್ಲೂ ಸವರ್ಣೀಯರನ್ನು ಆಶ್ರಯಿಸುತ್ತಾ ಜೀವನ ನಡೆಸುತ್ತಿದ್ದುದನ್ನು ಕಣ್ಣಾರೆ ಕಂಡಿದ್ದ ಚನ್ನಿಗರಾಮಯ್ಯನವರು ದಲಿತರನ್ನು ಸವರ್ಣೀಯರ ಹಿಡಿತದಿಂದ ಬಿಡುಗಡೆಗೊಳಿಸಲು ಚಿಂತನೆ ನಡೆಸಿದರು. ಸ್ವಾವಲಂಬಿಗಳಾಗಿ ಬಾಳಲು ಮೈಸೂರು ರಾಜ್ಯದಲ್ಲಿ ಸರ್ಕಾರದ ವಶದಲ್ಲಿದ್ದ ಶೇಂದಿವನಗಳನ್ನು ತೆರವು ಮಾಡಿಸಿ ಕಾಲೋನಿಗಳನ್ನಾಗಿ ಮಾಡಿದರು. ಆ ಪ್ರದೇಶದಲ್ಲಿ ದಲಿತರಿಗೆ ಮಾತ್ರ ಅವಕಾಶವನ್ನು ಮೀಸಲಿಟ್ಟು ವ್ಯವಸಾಯದ ಕಾಲೋನಿಗಳನ್ನು ಸ್ಥಾಪಿಸಿದರು. ಅಲ್ಲಿ ನೆಲೆಸುವ ಕುಟುಂಬಗಳಿಗೆ ಎಲ್ಲಾ ವಿಧವಾದ ಸೌಕರ್ಯಗಳನ್ನು ಸರ್ಕಾರದಿಂದಲೇ ಒದಗಿಸಿದರು. ಇದರ ಪರಿಣಾಮವಾಗಿ ಅನೇಕ ನಿರ್ಗತಿಕ ದಲಿತ ಕುಟುಂಬಗಳು ಸ್ವಾವಲಂಭಿಗಳಾಗಿ ಜೀವನ ನಡೆಸಲು ಅನುಕೂಲವಾಯಿತು. ಹಳೇ ಮೈಸೂರು, ಚಿತ್ರದುರ್ಗ, ಬಳ್ಳಾರಿ, ಚಳ್ಳಕೆರೆ ಮುಂತಾದ ಕಡೆ ಇಂದಿಗೂ ಈ ಕಾಲೋನಿಗಳನ್ನು ಕಾಣಬಹುದು.[೧೨] ಗಾಂಧಿ ತತ್ವಗಳ ಅನುಯಾಯಿಗಳಾದ ಚನ್ನಿಗರಾಮಯ್ಯನವರು ದಲಿತೋದ್ಧಾರಕ ಮಹಾತ್ಮ ಗಾಂಧೀಜಿಯವರ ಜನ್ಮಶತಾಬ್ಧಿ ಅಂಗವಾಗಿ ಮಹಾತ್ಮನಿಗೆ ಪ್ರಣಾಮ ಅರ್ಪಿಸಲು ೧೯೬೯ರಲ್ಲಿ ಕೊರಟಗೆರೆಯಲ್ಲಿ ಮೈಸೂರು ರಾಜ್ಯಮಟ್ಟದ ಪರಿಶಿಷ್ಟ ಜಾತಿ ಸಮ್ಮೇಳನವನ್ನು ಮಾಡಿದರು. ಇದು ತಮ್ಮ ಜೀವಿತ ಕಾಲದಲ್ಲಿ ಸ್ವಂತ ಊರಿನಲ್ಲಿ ನಡೆಸಿದ ಕಟ್ಟ ಕಡೆಯ ಸಮ್ಮೇಳನ. ಇದು ರಾಜ್ಯದಲ್ಲೇ ಮೊದಲ ಹಾಗೂ ದೊಡ್ಡಪ್ರಮಾಣದ ಅಧಿವೇಶನವಾಗಿತ್ತು. ತುಮಕೂರಿನ ಸಿದ್ಧಗಂಗಾಮಠದ ಶ್ರೀ ಶಿವಕುಮಾರ ಸ್ವಾಮಿಯವರು ಈ ಅಧಿವೇಶನಕ್ಕೆ ಆಗಮಿಸಿ ಇಂತಹ ಕಾರ್ಯಗಳನ್ನು ಪ್ರೋತ್ಸಾಹಿಸಿದ್ದರು. ಈ ಅಧಿವೇಶನಕ್ಕೆ ರಾಜ್ಯದ ಅನೇಕ ಮಂತ್ರಿವರ್ಯರು ಆಗಮಿಸಿ ಅಂದಿನ ಪರಿಶಿಷ್ಟ ಜನಾಂಗದ ಸ್ಥಿತಿಗತಿಗಳನ್ನು ವಿಸ್ತಾರವಾಗಿ ಚರ್ಚೆ ಮಾಡಿ ಅವರ ಅಭಿವೃದ್ಧಿಗಾಗಿ ಅನೇಕ ಕಾರ್ಯಕ್ರಮಗಳನ್ನು ರೂಪಿಸಿದರು. ಚನ್ನಿಗರಾಮಯ್ಯನವರು ದಲಿತ ಕುಟುಂಬದಲ್ಲಿ ಜನಿಸಿದ್ದರಿಂದ ದಲಿತರ ದನಿಯಾಗಿ ರೂಪುಗೊಳ್ಳಲು ಸಹಕಾರಿಯಾಯಿತು.[೧೩] ಭಾರತ ಶ್ರೇಣೀಕೃತ ಜಾತಿಪದ್ಧತಿಯ ದೇಶ. ವೈದಿಕವಾದದಲ್ಲಿ ಅವೈದಿಕ ಪರಂಪರೆ ಸಿಕ್ಕಿ ನಲುಗುತ್ತಿರುವ ಇಲ್ಲಿ ಅವೈದಿಕ ಸಮಾಜ ಜಾತಿ ನೆಲೆಯ ಎಲ್ಲಾ ಬಗೆಯ ಶೋಷಣೆಯನ್ನು ಅನುಭವಿಸಿಕೊಂಡು ಬಂದಿದೆ. ಜಾತಿಗಳಲ್ಲಿ ಅತ್ಯಂತ ಕೆಳಸ್ತರದಲ್ಲಿ ಅಸ್ಪೃಶ್ಯ ಸಮಾಜ ಇರುತ್ತದೆ. ಅಸ್ಪೃಶ್ಯ ಎಂದರೆ ಮುಟ್ಟಿಸಿಕೊಳ್ಳಲು ಅಯೋಗ್ಯವಾದದ್ದು ಎಂದರ್ಥ. ಮಾನವ ಸಮಾನತೆಯನ್ನು ಎಲ್ಲಾ ಹಂತಗಳಲ್ಲೂ ನಿರಾಕರಿಸುತ್ತಾ ಬಂದಿರುವ ಮೇಲ್ವರ್ಗ ಅಸ್ಪೃಶ್ಯರನ್ನು ಪ್ರಾಣಿಗಳಿಗಿಂತಲೂ ಕೀಳಾಗಿ ನಡೆಸಿಕೊಂಡು ಬಂದಿದೆ ಇಂತಹ ಸಮಾಜದಲ್ಲಿ ಸಾರ್ವಜನಿಕವಾದ ಎಲ್ಲಾ ಕ್ಷೇತ್ರಗಳನ್ನು ಮುಕ್ತವಾಗಿ ಅಸ್ಪೃಶ್ಯರು ಪ್ರವೇಶಿಸುವಂತಿರಲಿಲ್ಲ. ಕೆರೆ, ಬಾವಿ, ದೇವಸ್ಥಾನ, ಹೊಟೇಲುಗಳು ಇತ್ಯಾದಿ ಕಡೆ ಪ್ರವೇಶ ವಂಚಿತರಾಗಿದ್ದರು. ಇಂತಹ ಸಾಮಾಜಿಕ ಪಿಡುಗುಗಳು ಅಸ್ಪೃಶ್ಯತಾ ಆಚರಣೆ ಮುಂತಾದ ಅನಿಷ್ಟ ಪದ್ಧತಿಗಳು ಚನ್ನಿಗರಾಮಯ್ಯನವರ ಮೇಲೆ ಗಾಢವಾದ ಪ್ರಭಾವ ಬೀರಿದವು. ದಲಿತ ಜನಾಂಗದಲ್ಲಿ ಹುಟ್ಟಿ ಇಂತಹ

ಆಚರಣೆಗಳಿಂದ ಸ್ವತಃ ಚನ್ನಿಗರಾಮಯ್ಯನವರು ನೋವನ್ನು ಅನುಭವಿಸಿದ್ದರು. ದಲಿತರ ಎಲ್ಲಾ ರೀತಿಯ ಕಷ್ಟ, ನೋವು ಸಮಸ್ಯೆಗಳನ್ನು ಕಣ್ಣಾರೆ ಕಂಡಿದ್ದರು. ತಮ್ಮ ಸಮುದಾಯವು ಎದುರಿಸುತ್ತಿರುವ ಸಮಸ್ಯೆಗಳು, ಕಷ್ಟಗಳಿಗೆ ಸ್ಪಂದಿಸಿ ಅವುಗಳಿಂದ ಮುಕ್ತಗೊಳಿಸಲು ಯೋಚಿಸುತ್ತಿದ್ದರು. ಅಸ್ಪೃಶ್ಯತೆಯನ್ನು ಹೋಗಲಾಡಿಸಲು ತಮ್ಮ ಜೀವನ ಪೂರ್ತಿ ಹೋರಾಟ ನಡೆಸುತ್ತಾ ಬಂದರು. ಸ್ವಾತಂತ್ರ್ಯ ಪೂರ್ವದಿಂದಲೂ ರಾಜಕಾರಣದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದ ಅವರು ದಲಿತರ ಅಭಿವೃದ್ಧಿಯ ಬಗ್ಗೆ ಸಮಾಜದಲ್ಲಿ ಅವರ ಉನ್ನತಿಯ ಬಗ್ಗೆ ಸದಾ ಚಿಂತನೆ ನಡೆಸುತ್ತಾ ಹುಟ್ಟಿದ ಜಿಲ್ಲೆಗೆ, ತಾಲ್ಲೂಕಿಗೆ ಹಾಗೂ ಕೊರಟಗೆರೆಗೆ ಗಮನಾರ್ಹ ಸೇವೆ ಸಲ್ಲಿಸಿ ತಾಲ್ಲೂಕಿನ ಜನಮನದಲ್ಲಿ ಅಚ್ಚಳಿಯದಂತೆ ನಿಂತು ಕೊರಟಗೆರೆ ಇತಿಹಾಸದಲ್ಲಿ ಅಗ್ರಸ್ಥಾನವನ್ನು ಪಡೆದು ಕಳಶಪ್ರಾಯರಾಗಿರುತ್ತಾರೆ.[೧೪]

## ೨.೨ ಚನ್ನಿಗರಾಮಯ್ಯ ಅವರ ಕೌಟುಂಬಿಕ ಜೀವನ

ಚನ್ನಿಗರಾಮಯ್ಯ ಅವರು ವಿದ್ಯಾಭ್ಯಾಸದ ನಂತರ ಹಳ್ಳಿಯಲ್ಲಿ ವ್ಯವಸಾಯ ಮಾಡುತ್ತಿದ್ದರು. ಜೊತೆಗೆ ಹಳ್ಳಿಗಳಲ್ಲಿ ಬಾವಿಯನ್ನು ತೆಗೆಸುವ ಕಂಟ್ರಾಕ್ಟರ್ ಆಗಿ ಕಾರ್ಯ ನಿರ್ವಹಿಸುತ್ತಿದ್ದರು. ಹಳ್ಳಿಗಳನ್ನು ಸೈಕಲ್‌ನಲ್ಲಿ ಸುತ್ತಿ ಕೆಲಸ ಮಾಡಿಸುತ್ತಿದ್ದರು. ನಂತರ ತುಮಕೂರಿನಲ್ಲಿ ಗುಮಾಸ್ತರಾಗಿ ಕೆಲಸ ಮಾಡಿದರು. ಅವರ ತಾರುಣ್ಯದಲ್ಲಿ ಸೋದರತ್ತೆಯ ಮಗಳಾದ ಚಿಕ್ಕರಂಗಮ್ಮನೊಂದಿಗೆ ಬಲವಂತವಾಗಿ ಮದುವೆ ಮಾಡಿಸಿದರು. ಈ ಸಂಬಂಧ ಚನ್ನಿಗರಾಮಯ್ಯನವರಿಗೆ ಸ್ವಲ್ಪವೂ ಇಷ್ಟವಿರಲಿಲ್ಲ. ಅದಕ್ಕೆ ಅವರು ಒಂದು ದಿನ ಸಹ ಆ ಹುಡುಗಿಯನ್ನು ನೋಡದೆ, ಅವಳ ಜೊತೆ ಮಾತನ್ನೂ ಸಹ ಆಡದೆ ಒಂದು ವರ್ಷ ಕಳೆದರಂತೆ. ಮನಸ್ಸಿಗೆ ತುಂಬಾ ಬೇಜಾರಾಗಿ ಊರು ಬಿಡುವುದಾಗಿ ತಾಯಿಯ ಹತ್ತಿರ ಹೇಳಿಕೊಂಡರು. ಅದಕ್ಕೆ ಅವರ ತಾಯಿ ಸಮಾಧಾನದ ಮಾತನಾಡಿ ನ್ಯಾಯಬದ್ಧವಾಗಿ ಈ ಸಂಬಂಧದಿಂದ ಬಿಡುಗಡೆಗೊಳಿಸಿ ಆ ಹೆಣ್ಣು ಮಗಳಿಗೂ ಅನ್ಯಾಯವಾಗದಂತೆ ಮತ್ತೊಂದು ಮದುವೆ ಮಾಡಿಸಿದರು. ಇವರಿಗೂ ಮತ್ತೊಂದು ಮದುವೆ ಮಾಡಿಸಿದರು. ಅವರೇ ದೊಡ್ಡನರಸಮ್ಮ. ಇವರು ತುಮಕೂರಿನ ದೊಡ್ಡೇರಿ ಹನುಮಂತಪ್ಪನವರ ಹಿರಿಯ ಮಗಳು.[೧೫] ಈಕೆಯ ದೊಡ್ಡಪ್ಪ ಕುಲುಮೆ ಚಿಕ್ಕಣ್ಣನವರು Member of Represenative Assembly ಮೆಂಬರ್ ಆಗಿದ್ದರು. ಚನ್ನಿಗರಾಮಯ್ಯನವರು ವಿದ್ಯಾವಂತರಾಗಿದ್ದರಿಂದ ಕುಲುಮೆ ಚಿಕ್ಕಣ್ಣನವರು ಆ ಸ್ಥಾನವನ್ನು ಇವರಿಗೆ ಬಿಟ್ಟುಕೊಟ್ಟರು. ಅಲ್ಲಿಂದ ಚನ್ನಿಗರಾಮಯ್ಯನವರ ರಾಜಕೀಯ ಜೀವನ ಪ್ರಾರಂಭವಾಯಿತು. ಇವರ ಪತ್ನಿ ದೊಡ್ಡನರಸಮ್ಮ ಹಳ್ಳಿಯಲ್ಲಿ ಬೆಳೆದವರು. ಅನಕ್ಷರಸ್ಥರಾಗಿದ್ದರೂ ಗಂಡನಿಗೆ ತಕ್ಕ ಹೆಂಡತಿಯಾಗಿ ಅವರು ಹೇಳಿದ್ದನ್ನು ಪಾಲಿಸಿಕೊಂಡು ಬಂದರು. ಇವರು ಮಹಾ ದೈವಭಕ್ತೆ, ದೇಶಭಕ್ತೆ, ದೊಡ್ಡವರಿಗೆ ಗೌರವ ಕೊಡುವುದು ಈ ಎಲ್ಲಾ ಗುಣಗಳು ಇವರಿಗೆ ದೊಡ್ಡ ಕುಟುಂಬದಲ್ಲಿ ಬೆಳೆದಿದ್ದರಿಂದ ಸಹಜವಾಗಿ ಬಂದಿತ್ತು. ಇವರ ಏಳಿಗೆಗೆ, ಅಭಿವೃದ್ಧಿಗೆ ಇವರೇ ಪ್ರಮುಖ ಕಾರಣರಾಗಿದ್ದರು. ಇವರು ಮಂತ್ರಿಯ ಹೆಂಡತಿಯಾದರೂ ಸಹ ಒಂದು ದಿನವೂ ಅಹಂಕಾರ ಪಟ್ಟವರಲ್ಲ. ಇವರ ಒಳ್ಳೆಯ ಗುಣಗಳು ಚನ್ನಿಗರಾಮಯ್ಯನವರ ಏಳಿಗೆಗೆ ಮತ್ತು ಅಭಿವೃದ್ಧಿಗೆ ಸಹಕಾರಿಯಾಯಿತು. ಇವರ ದಾಂಪತ್ಯ ಜೀವನ

ತುಂಬಾ ಚೆನ್ನಾಗಿ ಬೆಳೆಯಿತು. ಇವರು ರಾಜವರ್ಧನ, ಲೀಲಮ್ಮ, ಶಾರದ, ನರಸಿಂಹಯ್ಯ, ವಿಜಯಲಕ್ಷ್ಮಿ, ಅರುಂಧತಿ, ಶಾಂತಕುಮಾರಿ, ಶಿವರಾಮ್ ಎಂಬ ಮೂವರು ಪುತ್ರರು, ಐವರು ಪುತ್ರಿಯರನ್ನು ಹೊಂದಿದ್ದಾರೆ.[೧೬] ಇವರ ಹಿರಿಯ ಮಗ ತಮ್ಮ ತಂದೆಯ ಹಾದಿಯಲ್ಲಿಯೇ ನಡೆದು ಅವರಿಂದ ಪ್ರಭಾವಿತರಾಗಿ ರಾಜಕೀಯ ಪ್ರವೇಶಿಸಿದರು. ಇವರು ಮಾಜಿ ಮುಖ್ಯಮಂತ್ರಿಗಳಾದ ಶ್ರೀ ದೇವರಾಜ ಅರಸು ಅವರ ಕಾಲದಲ್ಲಿ ಲಿಡ್ಕರ್ ಛೇರ್ಮನ್ ಆಗಿ ಕೆಲವು ವರ್ಷಗಳ ಕಾಲ ಕಾರ್ಯ ನಿರ್ವಹಿಸಿದರು. ನಂತರ ತುಮಕೂರು ಜಿಲ್ಲೆಯ ಮಧುಗಿರಿ ಮೀಸಲು ವಿಧಾನಸಭಾ ಕ್ಷೇತ್ರದಿಂದ ಕ್ರಾಂತಿರಂಗ ಪಕ್ಷದ ವತಿಯಿಂದ ವಿಧಾನಸಭಾ ಸದಸ್ಯರಾಗಿ ಆಯ್ಕೆಯಾದರು. ಮಾಜಿ ಮುಖ್ಯಮಂತ್ರಿಗಳಾದ ಶ್ರೀ ರಾಮಕೃಷ್ಣ ಹೆಗಡೆಯವರ ಮಂತ್ರಿಮಂಡಲದಲ್ಲಿ ಸಮಾಜ ಕಲ್ಯಾಣ ಹಾಗೂ ಮೀನುಗಾರಿಕೆ ಖಾತೆಗಳಲ್ಲಿ ಕ್ಯಾಬಿನೆಟ್ ದರ್ಜೆಯ ಮಂತ್ರಿಯಾಗಿ ರಾಜ್ಯಕ್ಕೆ ಸೇವೆ ಸಲ್ಲಿಸಿದರು. ನಂತರ Foot Designing Development Institute(FDDI) ಛೇರ್ಮನ್ ಆಗಿ ಕಾರ್ಯ ನಿರ್ವಹಿಸಿದರು. ತಂದೆಯವರ ವಿಶೇಷ ಗುಣಗಳನ್ನು ಅಳವಡಿಸಿಕೊಂಡು ಅದರ ಮಾರ್ಗದರ್ಶನದಂತೆ ಜೀವನ ನಡೆಸಿದರು.

ಶ್ರೀ ಆರ್.ಚನ್ನಿಗರಾಮಯ್ಯನವರ ಹೆಸರನ್ನು ಪ್ರಾಯಶಃ ಕೇಳದವರಿಲ್ಲ. ರಾಜ್ಯದ ಪ್ರಥಮ ದಲಿತ ಮಂತ್ರಿಯಾಗಿ ಸುಮಾರು ನಾಲ್ಕು ದಶಕಗಳ ಕಾಲ ರಾಜ್ಯದ ದಲಿತರ ಹಾಗೂ ಸವರ್ಣೀಯರ ಏಳಿಗೆಗಾಗಿ ಶ್ರಮಿಸಿದರು. ತನ್ನ ಜೀವನದುದ್ದಕ್ಕೂ ಪ್ರಾಮಾಣಿಕತೆ, ನಿಷ್ಠೆ, ದೇಶಪ್ರೇಮವನ್ನು ಮೈಗೂಡಿಸಿಕೊಂಡಿದ್ದ ಶ್ರೀಯುತರು ೬೫ ವರ್ಷಗಳ ಕಾಲ ತುಂಬುಜೀವನವನ್ನು ನಡೆಸಿ ಜನವರಿ ೨೧ ೧೯೭೬ ನಿಧನರಾದರು.

ದಿವಂಗತ ಚನ್ನಿಗರಾಮಯ್ಯನವರಿಗೆ ತಾಲ್ಲೂಕಿನಲ್ಲಿ ಎಲ್ಲಾ ವರ್ಗದ ಜನರೊಡನೆ ಬೆರೆತು ಅವರಿಂದ ಪ್ರೀತಿ ಪುರಸ್ಕಾರವನ್ನು ಪಡೆದಿದ್ದರು. ವಿದ್ಯಾರ್ಜನೆಯಲ್ಲಿ ಕಡಿಮೆಯಿದ್ದರೂ ಅವರ ಅಪಾರ ಅನುಭವ ಹಾಗೂ ಜ್ಞಾನಕ್ಕೆ ಬೆಲೆ ಕಟ್ಟಲು ಸಾಧ್ಯವಿಲ್ಲ. ಭಾಷಣ ಮಾಡುವುದರಲ್ಲಿ ಅವರ ನಿರ್ಮಲ ಮನಸ್ಸು ಕಂಡು ಬರುತ್ತಿದ್ದಿತು. ಯಾವ ಸಂದರ್ಭದಲ್ಲಿಯೂ ಆಮಿಷಕ್ಕೆ ತಲೆ ಬಾಗಿದವರಲ್ಲ. ಅವರ ಮಾತು, ಉಡುಗೆ, ತೊಡುಗೆ ಸಭ್ಯತೆಗಳಲ್ಲಿ ಅವರ ಸರಳತೆ ಸ್ಪಷ್ಟವಾಗಿ ಕಂಡುಬರುತ್ತಿತ್ತು. ಸಮಾಜದಲ್ಲಿ ಸಾವಿರಾರು ವರ್ಷಗಳಿಂದ ಬೇರೂರಿ ಬಂದಿರುವ ಜಾತಿ, ಮೃತ, ಸ್ಪೃಶ್ಯ, ಅಸ್ಪೃಶ್ಯವೆಂಬ ಮೇಲು ಕೀಳು ಕಳಂಕವನ್ನು ಹೋಗಲಾಡಿಸಿ ಜಾತ್ಯತೀತ ಸಮಾಜ ಸೃಷ್ಟಿಸಲು ನುಡಿದಂತೆ ನಡೆದರು.

ಇಂತಹ ತ್ಯಾಗಪೂರ್ಣ ಸಾರ್ಥಕ ಜೀವನ ನಡೆಸಿ ಸಮಾಜದ ಎಲ್ಲಾ ವರ್ಗದವರ ಮೆಚ್ಚುಗೆಗೆ ಪಾತ್ರರಾಗಿದ್ದರು. ದಿವಂಗತರು ಪತ್ನಿ, ಮೂವರು ಪುತ್ರರು, ಐವರು ಪುತ್ರಿಯರು ಮತ್ತು ಅಪಾರ ಬಂಧು ಬಳಗದವರನ್ನು ಅಗಲಿರುತ್ತಾರೆ. ಶ್ರೀಯುತರ ಮರಣದಿಂದ ದಲಿತರು ಹಾಗೂ ಹಿಂದುಳಿದ ವರ್ಗದವರು ಒಬ್ಬ ನಿಷ್ಠಾವಂತ ಹಾಗೂ ಪ್ರಾಮಾಣಿಕ ನಾಯಕನನ್ನು ಕಳೆದುಕೊಂಡಂತಾಗಿದೆ.[೧೭] ಅವರ ಬದುಕು ದಲಿತರಿಗೆ ಹಾಗೂ ಇತರೆ ಜನಾಂಗದ ಮುಂದಿನ ಎಲ್ಲಾ ಪೀಳಿಗೆಗೆ ಆದರ್ಶಪ್ರಾಯವಾಗಿದೆ.

## ೨.೩. ಚನ್ನಿಗರಾಮಯ್ಯ ಅವರ ಮೇಲೆ ಸೈದ್ಧಾಂತಿಕ ಪ್ರಭಾವ

ಆರ್.ಚನ್ನಿಗರಾಮಯ್ಯ ಅವರು ಬಾಲ್ಯದಲ್ಲಿ ಪ್ರಮುಖವಾಗಿ ತಂದೆಯ ಪ್ರಭಾವಕ್ಕೆ ಒಳಗಾಗಿದ್ದರು. ಇವರ ತಂದೆ ರಾಮಹನುಮಯ್ಯನವರು ಮಧುಗಿರಿ ಸಬ್ ಡಿವಿಜನ್‌ನ ದೀನ ದಲಿತರ ಪಿತಾಮಹರಂತೆ

ಇದ್ದರು. ಶೋಷಿತರ ವಿದ್ಯಾಭ್ಯಾಸ, ಆರ್ಥಿಕ ಹಾಗೂ ಸಮಾಜ ಸುಧಾರಣೆಗಾಗಿ ಶ್ರಮಿಸುತ್ತಿದ್ದರು. ಇವರು ಸಂಗೀತ, ಲಾವಣಿ, ಕನಕವಾದ್ಯ, ಯಕ್ಷಗಾನ, ನಾಟಕ, ಭೂತವಿದ್ಯೆ, ಪಿಶಾಚಿ ಉಚ್ಚಾಟನೆಯಲ್ಲಿ ಹೆಸರುವಾಸಿಯಾದವರು. ಸಾಧು ಸಂತರ ಸೇವೆಯಲ್ಲಿ ದಾಸೋಹದಲ್ಲಿ ಇವರಿಗೆ ತುಂಬಾ ಶ್ರದ್ಧೆ ಇತ್ತು. ಸುತ್ತ ಮುತ್ತಲಿನ ಹಳ್ಳಿಗಳಲ್ಲಿ ಯಾವುದಾದರೂ ಘರ್ಷಣೆ ಅಥವಾ ಸಮಸ್ಯೆ ಉದ್ಭವಿಸಿದರೆ ನ್ಯಾಯ ತೀರ್ಮಾನಕ್ಕಾಗಿ ಇವರ ಹತ್ತಿರ ಜನರು ಬರುತ್ತಿದ್ದರು. ಇವರಿಗೆ ಬುದ್ಧಿ ಹೇಳಿ ನ್ಯಾಯ ಸಿಗುವಂತೆ ಎಲ್ಲರೂ ಒಪ್ಪುವಂತಹ ತೀರ್ಮಾನ ಮಾಡಿ ಕಳುಹಿಸಿಕೊಡುತ್ತಿದ್ದರು. ಈ ಕಾರಣದಿಂದ ಇವರನ್ನು ಯಜಮಾನ್ ರಾಮಹನುಮಯ್ಯ ಎಂದು ಕರೆಯುತ್ತಿದ್ದರು. ಇದರಿಂದಾಗಿ ಸುತ್ತಮುತ್ತಲಿನ ಜನರ ಪ್ರೀತಿಗೆ ಪಾತ್ರರಾಗಿದ್ದರು. ಹಾಗಾಗಿ ಇವರ ತಂದೆಯವರ ಪರೋಪಕಾರ, ಪ್ರಾಮಾಣಿಕತೆ, ನಿಷ್ಠೆ, ಸಮುದಾಯದ ಬಗೆಗಿನ ಕಾಳಜಿ ಮುಂತಾದ ಅನೇಕ ಗುಣಗಳು ಇವರ ಮೇಲೆ ಪ್ರಭಾವ ಬೀರಿದ್ದವು. ನಂತರದ ದಿನಗಳಲ್ಲಿ ರಾಷ್ಟ್ರೀಯ ಚಳುವಳಿ ತೀವ್ರ ಸ್ವರೂಪವನ್ನು ಪಡೆಯಿತು. ಅಪ್ಪಟ ದೇಶಪ್ರೇಮಿಯಾಗಿದ್ದ ಚನ್ನಿಗರಾಮಯ್ಯ ಅವರು ಭಾರತದ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿದರು. ಹಲವಾರು ಏಳು ಬೀಳುಗಳನ್ನು ಕಂಡು ಮುಂದುವರಿದು ಬಂದಂತಹ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ಗಾಂಧೀಜಿಯವರ ನೇತೃತ್ವದಲ್ಲಿ ತೀವ್ರವಾಗಿ ಹೋರಾಟವನ್ನು ಮುಂದುವರಿಸಲು ಅನುವಾಯಿತು. ಗಾಂಧೀಜಿಯವರು ಸ್ವಾತಂತ್ರ್ಯ ಚಳುವಳಿಯಲ್ಲಿ ಸಕ್ರಿಯವಾಗಿ ಭಾಗವಹಿಸಿ ತಮ್ಮ ಅಹಿಂಸಾ ನೀತಿ, ಸತ್ಯಾಗ್ರಹ, ಅಸಹಕಾರ ಮುಂತಾದ ಅಸ್ತ್ರಗಳನ್ನು ಬ್ರಿಟಿಷರ ವಿರುದ್ಧ ಪ್ರಯೋಗಿಸಿ ಭಾರತವು ಸ್ವಾತಂತ್ರ್ಯ ಗಳಿಸುವಲ್ಲಿ ಪ್ರಮುಖ ಪಾತ್ರ ವಹಿಸಿದರು. ಗಾಂಧೀಜಿ ರೂಪಿಸಿಕೊಂಡಿದ್ದ ಸತ್ಯಾಗ್ರಹದ ಪ್ರಧಾನ ಎರಡು ಅಂಶಗಳೆಂದರೆ ಸತ್ಯ ಮತ್ತು ಅಹಿಂಸೆ. ಸತ್ಯಾಗ್ರಹಿಯು ತಾನು ಯಾವುದು ತಪ್ಪು ಎಂದು ಪರಿಗಣಿಸುತ್ತಾನೋ ಅದಕ್ಕೆ ಶರಣಾಗಲು ನಿರಾಕರಿಸುತ್ತಾನೆ. ಎಲ್ಲಾ ಬಗೆಯ ಪ್ರಚೋದನೆಗಳು ಎದುರಾದಾಗಲೂ ಅವನು ಶಾಂತ ಚಿತ್ತದಿಂದಿರುತ್ತಾನೆ. ಅವನು ದೋಷವನ್ನು ಪ್ರತಿಭಟಿಸುತ್ತಾನೆ. ಆದರೆ ದೋಷಿಯನ್ನು ದ್ವೇಷಿಸುವುದಿಲ್ಲ. ಅವನು ಸತ್ಯವನ್ನು ಎತ್ತಿ ಹಿಡಿಯುತ್ತಾನೆ, ವಿರೋಧಿಗೆ ಹಿಂಸೆ ಮಾಡುವುದರಿಂದ ಅಲ್ಲ. ತಾನೇ ಯಾತನೆಯನ್ನು ಅನುಭವಿಸುವುದರ ಮೂಲಕ ತಪ್ಪಿತಸ್ಥನ ಆತ್ಮಶಕ್ತಿಯನ್ನೇ ಪ್ರಚೋದಿಸಿ ಅರಿವನ್ನು ಉಂಟುಮಾಡಬಹುದು. ಯಶಸ್ಸು ಸಾಧಿಸಬೇಕಾದರೆ ಸತ್ಯಾಗ್ರಹಿಯು ಸಂಪೂರ್ಣವಾಗಿ ಭೀತಿ, ದ್ವೇಷ ಮತ್ತು ಸುಳ್ಳುಗಳನ್ನು ತ್ಯಜಿಸಬೇಕು. ಇಂತಹ ಗಾಂಧೀಜಿಯವರ ವಿಚಾರಧಾರೆಗಳಿಂದ, ಚಿಂತನೆಗಳಿಂದ, ಹರಿಜನೋದ್ಧಾರ ಕಾರ್ಯಗಳಿಂದ ಪ್ರಭಾವಿತರಾಗಿ ಚನ್ನಿಗರಾಮಯ್ಯನವರು ದೇಶದ ಸ್ವಾತಂತ್ರ್ಯಕ್ಕಾಗಿ ಜನರನ್ನು ಸಂಘಟಿಸಿಕೊಂಡು ಗಾಂಧೀಜಿಯವರ ಆದರ್ಶದಂತೆ ಹೋರಾಟ ನಡೆಸುತ್ತಿದ್ದರು. ಸಕ್ರಿಯವಾಗಿ ಪ್ರತಿಯೊಂದು ಚಳುವಳಿಗಳಲ್ಲಿ ಭಾಗವಹಿಸುತ್ತಿದ್ದರು. ಬಾಪೂಜಿಯವರ ತತ್ವ ಸಿದ್ಧಾಂತಗಳು, ಚಿಂತನೆಗಳು ಇವರ ಮೇಲೆ ಹೆಚ್ಚು ಪ್ರಭಾವವನ್ನು ಉಂಟು ಮಾಡಿದ್ದವು. ದಲಿತೋದ್ಧಾರಕ್ಕಾಗಿ ತಮ್ಮ ಶಕ್ತಿಯನ್ನೆಲ್ಲಾ ವಿನಿಯೋಗಿಸಿದ ಬಾಬಾ ಸಾಹೇಬ್ ಅಂಬೇಡ್ಕರ್ ಅವರ ವಿಚಾರಧಾರೆಗಳು ಸಹ ಅವರ ಮೇಲೆ ಪ್ರಭಾವವನ್ನೇ ಉಂಟುಮಾಡಿದ್ದವು.[೧೮] ಅಂಬೇಡ್ಕರ್ ದೃಷ್ಟಿಯಲ್ಲಿ ದಲಿತೋದ್ಧಾರ ಕೇವಲ ಒಂದು ಜಾತಿ ಕೋಮಿಗೆ ಸೀಮಿತಗೊಂಡದ್ದಲ್ಲ. ಸಮಾಜದ ಎಲ್ಲಾ ವರ್ಗಗಳಲ್ಲಿ ಇದ್ದುಕೊಂಡು ಆಳುವವರ ತುಳಿತಕ್ಕೊಳಗಾಗಿ ಕತ್ತಲೆಯಿಂದ ಬೆಳಕಿಗೆ

ಬರಲು ಹಾತೊರೆಯುತ್ತಿದ್ದ ಎಲ್ಲಾ ದಲಿತರಲ್ಲಿ ಬದುಕಬೇಕೆಂಬ ಆಸೆಯನ್ನು ಅಂಬೇಡ್ಕರ್ ಚಿಗುರಿಸಿದರು. ಈ ಪ್ರಕಾರ ಅಂಬೇಡ್ಕರ್ ಜಗತ್ತಿನ ಎಲ್ಲಾ ದಲಿತರ ಶೋಷಿತರ ಆಶಾಕಿರಣವಾದರು. ಆಳುವವರನ್ನು ಕೇವಲ ಹಿಂಸಿಸುವುದರಿಂದ ಇಲ್ಲವೇ ಅವರನ್ನು ದ್ವೇಷಿಸುವುದರಿಂದ ದಲಿತರ ಸಂಕೋಲೆಗಳು ಕಳಚಿ ಹೋಗುವುದಿಲ್ಲ ಎಂಬುದನ್ನು ಅರಿತಿದ್ದ ಈ ಧೀಮಂತನಾಯಕ ದಲಿತರಲ್ಲಿ ಆತ್ಮಾಭಿಮಾನವನ್ನು ಧೈರ್ಯವನ್ನು ತುಂಬಲು ಹೆಣಗಾಡಿದರು. ಬೇಡುವುದನ್ನು ಬಿಟ್ಟು ಅರ್ಹತೆಯನ್ನು ಗಳಿಸಿಕೊಂಡು ಮೇಲೆರಬೇಕೆಂದು ತಿಳಿಸಿದ ಅಂಬೇಡ್ಕರ್ ತಮ್ಮ ಜೀವನದುದ್ದಕ್ಕೂ ಸಮಾನತೆಗಾಗಿ, ಅರ್ಹತೆಗಾಗಿ ಹೋರಾಡಿದರು. ರಾಷ್ಟ್ರಪಿತ ಬಾಪೂಜಿ ಹಿಂಸೆಯ ವಿರುದ್ಧ ಸಿಡಿದೆದ್ದು ಅಹಿಂಸಾ ಮಾರ್ಗದಲ್ಲಿ ಭಾರತೀಯರನ್ನು ಒಗ್ಗೂಡಿಸಿ ವಸಾಹತುಶಾಹಿಯ ವಿರುದ್ಧ ಹೋರಾಡಿ ದೇಶವಾಸಿಗಳ ವಿಮೋಚನೆಗೆ ಕಾರಣಕರ್ತರಾದರು. ಅಂಬೇಡ್ಕರ್ ಕೇವಲ ರಾಜಕೀಯ ಸ್ವಾತಂತ್ರ್ಯದಿಂದ ದಲಿತರ ಉದ್ಧಾರವಾಗದೆಂದು ಮನಗಂಡು ಅವರ ಸರ್ವತೋಮುಖ ಏಳಿಗೆಯ ಮಂತ್ರದೀಕ್ಷೆಯನ್ನು ಕೈಗೊಂಡು ಇಡೀ ಜೀವನವನ್ನು ಅದಕ್ಕಾಗಿ ಧಾರೆಯೆರೆದರು. ಈ ಇಬ್ಬರು ಮಹಾನ್ ನಾಯಕರ ಚಿಂತನೆಗಳು, ತತ್ವ ಸಿದ್ಧಾಂತಗಳು ಗಾಡವಾಗಿ ಚನ್ನಿಗರಾಮಯ್ಯ ಅವರ ಮೇಲೆ ಪ್ರಭಾವ ಬೀರತೊಡಗಿದವು. ದಲಿತರ ನಾಯಕನಾಗಿದ್ದು ದೇಶದಲ್ಲಿ ಹಾಗೂ ಹೊರಗಡೆ ಸರ್ವರಿಂದ ಪ್ರಶಂಸೆ ಪಡೆದಿದ್ದ ಬಾಬ ಸಾಹೇಬ್ ಅಂಬೇಡ್ಕರ್ ಅವರ ವಿಚಾರಧಾರೆಗಳು ಎಂದೆಂದೂ ಇವರಿಗೆ ದಾರಿ ದೀವಿಗೆಯಂತೆ ಮಾರ್ಗದರ್ಶನ ಮಾಡಿಸಬಲ್ಲವು. ಇವರಲ್ಲದೆ ಬುದ್ಧ, ಬಸವ, ಜ್ಯೋತಿಬಾ ಫುಲೆ, ನಾರಾಯಣಗಾರು, ಪೆರಿಯಾರ್, ಸ್ವಾಮಿ ವಿವೇಕಾನಂದ, ಡಾ.ಬಾಬು ಜಗಜೀವನರಾಮ್ ಮುಂತಾದ ಸಮಾಜ ಸುಧಾರಕರ ಆದರ್ಶಗಳು, ತತ್ವಸಿದ್ಧಾಂತಗಳು ಇವರ ವಿಚಾರಧಾರೆಗಳಿಂದ ಚನ್ನಿಗರಾಮಯ್ಯ ಅವರು ಪ್ರಭಾವಿತರಾಗಿ ಸಮಾಜದಲ್ಲಿ ಅವರ ತತ್ವ ಸಿದ್ಧಾಂತಗಳನ್ನು ಅನುಷ್ಠಾನಕ್ಕೆ ತರಲು ಪ್ರಾಮಾಣಿಕವಾಗಿ ಪ್ರಯತ್ನಿಸಿದರು.[೮]

ಇವರ ಹಾದಿಯಲ್ಲಿಯೇ ನಡೆದ ಚನ್ನಿಗರಾಮಯ್ಯನವರು ಹಲವಾರು ಸಾಮಾಜಿಕ ಕಾರ್ಯಗಳನ್ನು ಕೈಗೊಂಡರು. ಇವರು ವಿದ್ಯಾರ್ಥಿ ದೆಸೆಯಲ್ಲಿದ್ದಾಗಲೇ ತನ್ನ ಸಮುದಾಯದ ಅಂಧಶ್ರದ್ಧೆ, ಅಜ್ಞಾನ, ಮೂಢನಂಬಿಕೆಗಳಲ್ಲಿ ತೊಳಲಾಡುತ್ತಿದ್ದುದನ್ನು ಮತ್ತು ದಟ್ಟದಾರಿದ್ರ್ಯದಿಂದ ಬಳಲುತ್ತಿದ್ದುದನ್ನು ಕಣ್ಣಾರೆ ಕಂಡಿದ್ದ ಅವರು ಅನೇಕರೊಂದಿಗೆ ಚಿಂತನೆ ನಡೆಸಿ ಜಾಗೃತಿ ಉಂಟುಮಾಡಲು ರಚನಾತ್ಮಕ ಕಾರ್ಯ ಹಮ್ಮಿಕೊಂಡರು. ಅದಕ್ಕಾಗಿ ಅನೇಕ ಸಹೋದ್ಯೋಗಿಗಳ ಗುಂಪುಗಳನ್ನು ಕಟ್ಟಿ, ನಾಡಿನಾದ್ಯಂತ ಸಂಚರಿಸಿ, ಸಭೆ ಸಮಾರಂಭ ಸಮ್ಮೇಳನಗಳನ್ನು ನಡೆಸಿ ಆ ಮೂಲಕ ದಲಿತ ಸಮುದಾಯದಲ್ಲಿ ಜಾಗೃತಿ ಉಂಟುಮಾಡಿದರು. ಅಲ್ಲದೆ ತನ್ನ ಜನಾಂಗದವರ ಕುಂದುಕೊರತೆಗಳ ಬಗ್ಗೆ ಸಮಾಜದ ಅನೇಕ ಗಣ್ಯರ, ಶ್ರೀಮಂತರ ಮತ್ತು ಸರ್ಕಾರದ ಗಮನ ಸೆಳೆಯುವಂತೆ ಮಾಡಿದರು. ಆರ್ಥಿಕ, ನೈತಿಕ, ಸಾಮಾಜಿಕ ಮತ್ತು ಶೈಕ್ಷಣಿಕ ಸ್ಥಿತಿಗತಿಗಳ ಬವಣೆಯ ಬದಲಾವಣೆಗಾಗಿ ಅನೇಕ ಕಾರ್ಯಕ್ರಮಗಳನ್ನು ರೂಪಿಸಿದರು. ಜನತೆಯಲ್ಲಿ ಬೆರೆತು ಅವರ ಕಷ್ಟ ಸುಖಗಳಲ್ಲಿ ಭಾಗಿಯಾಗಿ, ಅಲ್ಲಲ್ಲಿ ಅವರವರ ಹಿತಕ್ಕಾಗಿ ಸಂಘಸಂಸ್ಥೆಗಳನ್ನು ಸ್ಥಾಪಿಸಿ, ಆ ಸಂಘಸಂಸ್ಥೆಗಳ ಮೂಲಕ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳುವಂತೆ ಮಾಡಿದರು. ದಲಿತ ಸಮುದಾಯದವರಿಗೆ ಸರ್ಕಾರದ ಮೂಲಕ ಅನೇಕ ಕಡೆ ಕಾಲೋನಿಗಳನ್ನು ನಿರ್ಮಿಸಲು ಶ್ರಮಿಸಿದರು. ಹೀಗೆ ಚನ್ನಿಗರಾಮಯ್ಯ

ಅವರು ಹಲವಾರು ಆದರ್ಶ ಪುರುಷರ ತತ್ವ ಸಿದ್ಧಾಂತಗಳನ್ನು ತಮ್ಮ ಜೀವನದುದ್ದಕ್ಕೂ ಅಳವಡಿಸಿಕೊಂಡು, ಅವರ ಮಾರ್ಗದಲ್ಲಿಯೇ ನಡೆದ ಅಪುರೂಪದ ವ್ಯಕ್ತಿಯಾಗಿದ್ದಾರೆ. ರಾಜಕಾರಣದ ಅತ್ಯುನ್ನತ ಪದವಿಗಳಿಂದ ಎಷ್ಟೇ ಪಂಡಿತರಾಗಿದ್ದರೂ, ಅವರಲ್ಲಿದ್ದ ಶ್ರದ್ಧೆ, ನಂಬಿಕೆ, ವಿಚಾರ, ನಡವಳಿಕೆ, ಸಂಸದೀಯತನ ಹಾಗೂ ರಾಷ್ಟ್ರೀಯ ಭಾವನೆಗಳೆಲ್ಲವೂ ಯುಗಾಂತರದಿಂದ ಯುಗಾಂತರಗಳಿಗೆ ಪರಿಚಯವಾಗುತ್ತಲೇ ಇರುತ್ತವೆ. ಇಂತಹ ಗುಣಗಳಿದ್ದ ಕಾರಣದಿಂದಲೇ ಅವರೊಬ್ಬ ಮೇರುನಾಯಕರಾಗಿಯೇ ಅಮೂರ್ತವಾಗಿ ನಮ್ಮೊಡನೆ ಜೀವಿಸುತ್ತಿದ್ದಾರೆ.[೨೦]

## ಅಡಿಟಿಪ್ಪಣಿ

೦೧. ಡಾ.ಎನ್.ಚಿನ್ನಸ್ವಾಮಿ ಸೋಸಲೆ, ಭಾರತೀಯ ಸಮಾಜ ಮತ್ತು ದಲಿತರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮, ಪುಟ-೫೮

೦೨. ಅದೇ ಪುಟ-೫೯

೦೩. ಅದೇ ಪುಟ-೬೦

೦೪. ಹಿ.ಚಿ.ಬೋರಲಿಂಗಯ್ಯ, ವೈ.ಕೆ.ರಾಮಯ್ಯನವರ ಜೀವನ ಮತ್ತು ಸಾಧನೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮, ಪುಟ-೧

೦೫. ಡಾ.ಸೂರ್ಯನಾಥ ಕಾಮತ್ (ಸಂ),. ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಸಂಪುಟ-೩, ಗೀತಾ ಬುಕ್ ಹೌಸ್, ಮೈಸೂರು, ೧೯೭೭, ಪುಟ-೫೦೮

೦೬. ಅದೇ ಪುಟ-೫೦೯

೦೭. ಶ್ರೀಮತಿ ಶಾರದಶಂಕರ್, ಮಗಳ ನೆನಪಿನಾಳದಲ್ಲಿ ಆರ್.ಸಿ., ಆಟದ ಬುಕ್ ಹೌಸ್, ಬೆಂಗಳೂರು, ೨೦೧೧, ಪುಟ-೭೮

೦೮. ಅದೇ ಪುಟ-೬೫

೦೯. ಅದೇ ಪುಟ-೬೬

೧೦. ಅದೇ ಪುಟ-೭೯

೧೧. ಡಾ.ಸೂರ್ಯನಾಥ ಕಾಮತ್ (ಸಂ),. ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಸಂಪುಟ-೩, ಗೀತಾ ಬುಕ್ ಹೌಸ್, ಮೈಸೂರು, ೧೯೭೭, ಪುಟ-೫೧೦

೧೨. ಭರಂಪುರ ಕಣುಮಪ್ಪ, ಮಾತಂಗ ಸಮಾಜದ ದಿಗ್ದರ್ಶಕರು, ಆದಿಜಾಂಬವ ವಿದ್ಯಾಭಿವೃದ್ಧಿ ಟ್ರಸ್ಟ್, ಬೆಂಗಳೂರು, ೨೦೧೦, ಪುಟ-೨೪

೧೩. ಶ್ರೀಮತಿ ಶಾರದಶಂಕರ್, ಮಗಳ ನೆನಪಿನಾಳದಲ್ಲಿ ಆರ್.ಸಿ., ಆಟದ ಬುಕ್ ಹೌಸ್, ಬೆಂಗಳೂರು, ೨೦೧೧, ಪುಟ-೭೦

೧೪. ಡಾ.ಎಚ್.ಕುಮಾರಸ್ವಾಮಿ, ದಲಿತ ಚಳವಳಿ ಮತ್ತು ಸಾಮಾಜಿಕ ನ್ಯಾಯ, ದಲಿತ ಅಭಿವೃದ್ಧಿ ಸಂಸ್ಥೆ, ಹೊಸಪೇಟೆ, ೨೦೧೦, ಪುಟ-೨೫

೧೫. ಶ್ರೀಮತಿ ಶಾರದಶಂಕರ್, ಮಗಳ ನೆನಪಿನಾಳದಲ್ಲಿ ಆರ್.ಸಿ., ಆಟದ ಬುಕ್ ಹೌಸ್, ಬೆಂಗಳೂರು, ೨೦೧೧, ಪುಟ-೧೫

೧೬. ಅದೇ ಪುಟ-೧೬

೧೭. ಅದೇ ಪುಟ-೭೪

೧೮. ಡಾ.ಎನ್.ಚಿನ್ನಸ್ವಾಮಿ ಸೋಸಲೆ, ಭಾರತೀಯ ಸಮಾಜ ಮತ್ತು ದಲಿತರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮, ಪುಟ-೫೮

೧೯. ದಾಸನೂರು ಕೂಸಣ್ಣ, ಸಮರ್ಥ ಸಂಸದೀಯ ಪಟು ಡಾ.ಬಾಬು ಜಗಜೀವನರಾಮ್, ಮಾತಂಗ ಪ್ರಕಾಶನ, ಮೈಸೂರು, ಪುಟ-೩೬೦

ಅಧ್ಯಾಯ - ಮೂರು

# ಸ್ವಾತಂತ್ರ್ಯ ಚಳುವಳಿಯಲ್ಲಿ ಆರ್.ಚನ್ನಿಗರಾಮಯ್ಯ ಅವರ ಪಾತ್ರ

ಮಾನವನು ಸ್ವತಂತ್ರ ಜೀವಿ, ಅನ್ಯರ ಅಧೀನದಲ್ಲಿ ಬದುಕಲು ಇಚ್ಛಿಸುವುದಿಲ್ಲ. ಆಕಸ್ಮಿಕವಾಗಿ ಅನ್ಯರ ಆಳ್ವಿಕೆಗೆ ಸಿಕ್ಕಿ ಕೆಲವು ಕಾಲ ತೊಳಲಾಡಬೇಕಾಗಿ ಬಂದರೂ ಸಹ ಆದಷ್ಟು ಬೇಗ ಆ ಸಂಕೋಲೆಯಿಂದ ವಿಮೋಚನೆ ಹೊಂದಲು ಪ್ರಯತ್ನಿಸುತ್ತಾನೆ. ಸ್ವಾತಂತ್ರ್ಯಪೂರ್ವದಲ್ಲಿಭಾರತವು ಬ್ರಿಟಿಷರ ಒಡೆದು ಆಳುವ ನೀತಿಯಿಂದಾಗಿ ಛಿದ್ರ ಛಿದ್ರವಾಗಿ ಹರಿದು ಹೋಗಿತ್ತು. ಬ್ರಿಟೀಷರ ಆಧಿಪತ್ಯಕ್ಕೊಳಗಾದ ಮೇಲೆ ಭಾರತವು ಹನ್ನೊಂದು ಪ್ರಾಂತ್ಯಗಳು, ಆರುನೂರು ಸಂಸ್ಥಾನಗಳಾಗಿ ಇಬ್ಭಾಗವಾಯಿತು. ಪ್ರಾಂತ್ಯಾಡಳಿತವನ್ನು ಬ್ರಿಟಿಷ್ ಪ್ರತಿನಿಧಿಗಳಾದ ರಾಜ್ಯಪಾಲರು ನಿರ್ವಹಿಸುತ್ತಿದ್ದರು. ಸಂಸ್ಥಾನಗಳ ಆಡಳಿತವನ್ನು ಬ್ರಿಟಿಷ್ ಸಾರ್ವಭೌಮರ ಆಶ್ರಿತರಾಗಿ ದೇಶೀಯ ರಾಜರು ನಿರ್ವಹಿಸುತ್ತಿದ್ದರು. ಅಂದಿನ ಆರುನೂರು ಸಂಸ್ಥಾನಗಳಲ್ಲಿ ಮೈಸೂರು ಸಂಸ್ಥಾನವು ಒಂದು. ಸಂಸ್ಥಾನದಲ್ಲಿ ಅಂದಿನ ಶಿಕ್ಷಣ ವ್ಯವಸ್ಥೆ, ವೃತ್ತ ಪತ್ರಿಕೆಗಳು ೧೮೮೫ರಲ್ಲಿ ಸ್ಥಾಪಿತವಾದ ರಾಷ್ಟ್ರೀಯ ಕಾಂಗ್ರೆಸ್ ಜನರಲ್ಲಿ ರಾಜಕೀಯ ಜಾಗೃತಿ ಮೂಡಿಸಲು ಪ್ರಮುಖ ಪಾತ್ರ ವಹಿಸಿದ್ದವು. ಈ ಮಧ್ಯೆ ಬ್ರಿಟಿಷರ ಶಿಕ್ಷಣ, ವಿದ್ಯಾಲಯಗಳ ಸ್ಥಾಪನೆ, ಸಾಮಾಜಿಕ ಮತ್ತು ಧಾರ್ಮಿಕ ಆಂದೋಲನಗಳಿಂದ ಕರ್ನಾಟಕದ ಜನತೆಯಲ್ಲಿ ರಾಷ್ಟ್ರೀಯ ಜಾಗೃತಿ ಬೆಳವಣಿಗೆಯಾಯಿತು. ಕನ್ನಡದಲ್ಲಿ ಪ್ರಕಟಗೊಂಡ ವೃತ್ತ ಪತ್ರಿಕೆಗಳಿಂದಲೂ ಕರ್ನಾಟಕ ಇತಿಹಾಸ ರಚನೆಯಿಂದ ಮತ್ತು ಕನ್ನಡ ಸಾಹಿತ್ಯ ಸೃಷ್ಟಿಯಿಂದ ಕನ್ನಡಿಗರೆಲ್ಲಾ ನಾವೆಲ್ಲ ಒಂದೇ ಎಂಬ ಭಾವನೆ ಬೆಳೆದು ಕರ್ನಾಟಕದ ಮಹಿಳೆಯರು ಮತ್ತು ಪುರುಷರು ಸ್ವಾತಂತ್ರ್ಯ ಪಡೆಯುವಲ್ಲಿ ಅಮೂಲ್ಯ ಪಾತ್ರ ವಹಿಸಿದರು. ಬ್ರಿಟಿಷರ ನೇರ ಆಡಳಿತಕ್ಕೆ ಒಳಪಟ್ಟಿದ್ದ ಮದ್ರಾಸ್ ಕರ್ನಾಟಕ ಮತ್ತು ಮುಂಬೈ ಕರ್ನಾಟಕ ಭಾಗಗಳಲ್ಲಿ ಪ್ರಥಮವಾಗಿ ಸ್ವಾತಂತ್ರ್ಯ ಚಳವಳಿ ಆರಂಭವಾಯಿತು. ಅನಂತರ ಮೈಸೂರು ಸಂಸ್ಥಾನಕ್ಕೂ ಹರಡಿತು. ಈ ಸಂಸ್ಥಾನವು ಒಂಬತ್ತು ಜಿಲ್ಲೆಗಳನ್ನೊಂದಿತ್ತು. ಅವುಗಳಲ್ಲಿ ತುಮಕೂರು ಒಂದು ಪ್ರಾಚೀನ ಕಾಲದಿಂದಲೂ ಪ್ರಸಿದ್ಧಿ ಪಡೆದಿರುವ ಜಿಲ್ಲೆ. ಉತ್ತರಕ್ಕೆ ಅನಂತಪುರ

ಜಿಲ್ಲೆಯೂ, ಪೂರ್ವಕ್ಕೆ ಚಿತ್ರದುರ್ಗ ಮತ್ತು ಚಿಕ್ಕಮಗಳೂರು, ಹಾಸನ ಜಿಲ್ಲೆಗಳಿಂದ ಆವೃತವಾಗಿದೆ. ಕರ್ನಾಟಕದ ಸ್ವಾತಂತ್ರ್ಯ ಹೋರಾಟದಲ್ಲಿ ತುಮಕೂರು ಜಿಲ್ಲೆ ವಹಿಸಿದ ಪಾತ್ರ ಚಿರಸ್ಮರಣೀಯ. ಜಿಲ್ಲೆಯಲ್ಲಿ ಸುಮಾರು ಆರುನೂರಕ್ಕೂ ಹೆಚ್ಚು ಸ್ವಾತಂತ್ರ್ಯ ಹೋರಾಟಗಾರರಿದ್ದು, ಅವರಲ್ಲಿ ಬಹಳಷ್ಟು ಮಂದಿ ಹುತಾತ್ಮರಾಗಿದ್ದು, ಕೇವಲ ಬೆರಳೆಣಿಕೆಯಷ್ಟು ಮಾತ್ರ ಜೀವಂತವಾಗಿದ್ದಾರೆ. ಗಾಂಧೀಜಿಯವರು ಪರರ ದಾಸ್ಯದಿಂದ ವಿಮುಕ್ತಿ ಹೊಂದಲು ನಡೆಸಿದ ಅಸಹಕಾರ ಚಳುವಳಿ, ನಾಗರಿಕರ ಕಾನೂನುಭಂಗ ಚಳುವಳಿ, ಕ್ವಿಟ್ ಇಂಡಿಯಾ ಚಳುವಳಿಗಳೇ ಅಲ್ಲದೆ ಮೈಸೂರು ಸಂಸ್ಥಾನದಲ್ಲಿ ನಡೆದ ಮೈಸೂರು ಚಲೋ ಚಳುವಳಿಯಲ್ಲಿ ಸಕ್ರಿಯವಾಗಿ ಭಾಗವಹಿಸಿ ತಮ್ಮ ತನುಮನಗಳನ್ನು ಬಲಿದಾನ ಮಾಡಿದ್ದಾರೆ. ಜಿಲ್ಲೆಯ ಕೆಲವು ಪ್ರಮುಖ ಹೋರಾಟಗಾರರೆಂದರೆ ಕೆ.ರಂಗಯ್ಯಂಗಾರ್, ಮಾಲಿಮರಿಯಪ್ಪ, ಆರ್.ಚನ್ನಿಗರಾಮಯ್ಯ, ತಾಳಕೆರೆ ಸುಬ್ರಮಣ್ಯಂ, ಆರ್.ಎಸ್.ಆರಾಧ್ಯ, ಬಿ.ಸಿ.ನಂಜುಂಡಯ್ಯ, ಚೆಂಗಲಾರಾಧ್ಯ, ಭಾಗೀರಥಮ್ಮ, ಟಿ.ತಾರೇಗೌಡ, ಡಿ.ಎಸ್.ಮಲ್ಲಪ್ಪ, ಕೆ.ನಂಜುಂಡರಾವ್, ಕೆ.ಗಂಗಣ್ಣ ಮುಂತಾದವರು. ಮೈಸೂರು, ಬೆಂಗಳೂರು ನಗರಗಳನ್ನು ಹೊರತುಪಡಿಸಿದರೆ ಇಡೀ ರಾಜ್ಯಕ್ಕೆ ತುಮಕೂರು ಒಳ್ಳೆಯ ರಾಜಕೀಯ ಪ್ರಜ್ಞೆಯಿಂದ ಕೂಡಿದ್ದಿತು. ಜಿಲ್ಲೆಯಲ್ಲಿ ಸ್ವಾತಂತ್ರ್ಯ ಚಳುವಳಿಗೆ ಚಾಲನೆ ಕೊಟ್ಟ ಮೊದಲ ಕಾಂಗ್ರೆಸ್ಸಿಗರೆಂದರೆ ಕೆ.ರಂಗ್ಯಯ್ಯಂಗಾರ್, ೧೯೨೦ರ ನಾಗಪುರ ಕಾಂಗ್ರೆಸ್ ಅಧಿವೇಶನದಲ್ಲಿ ಕೈಗೊಂಡ ನಿರ್ಣಯದಂತೆ ಸಂಸ್ಥಾನದಲ್ಲಿ ಜಿಲ್ಲಾ ಮತ್ತು ಸ್ಥಳೀಯ ಕಾಂಗ್ರೆಸ್ ಶಾಖೆಗಳು ಪ್ರಾರಂಭವಾದವು. ೧೯೨೧-೨೨ರ ಸುಮಾರಿನಲ್ಲಿ "ತುಮಕೂರು ಜಿಲ್ಲಾ ಕಾಂಗ್ರೆಸ್ ಜನ್ಮತಾಳಿತು." ಕೆ.ರಂಗ್ಯಯ್ಯಂಗಾರ್ ಇದರ ಅಧ್ಯಕ್ಷರಾಗಿ ಜಿಲ್ಲೆಯಲ್ಲಿ ಖಾದಿ, ಸ್ವದೇಶಿ, ಪಾನನಿರೋಧ, ಹಿಂದಿ ಪ್ರಚಾರ, ಹರಿಜನಾಭಿವೃದ್ಧಿ, ಗೋಸಂರಕ್ಷಣೆ ಮುಂತಾದ ರಚನಾತ್ಮಕ ಕಾರ್ಯಗಳು ಯಶಸ್ವಿಯಾದವು. ಕೆ.ರಂಗ್ಯಯ್ಯಂಗಾರ್ "ಮೈಸೂರು ಕ್ರಾನಿಕಲ್" ಎಂಬ ಪತ್ರಿಕೆಯನ್ನು ರಚಿಸಿ, ಜನತೆಯಲ್ಲಿ ಸ್ವಾತಂತ್ರ್ಯ ಬೀಜವನ್ನು ಬಿತ್ತಿದರು.

### ೩.೧. ಗಾಂಧೀಜಿ ಅವರ ರಚನಾತ್ಮಕ ಕಾರ್ಯಗಳ ಪ್ರಭಾವ

ಬಲಿದಾನದಿಂದ ಗಳಿಸಿದ ಸ್ವಾತಂತ್ರ್ಯವನ್ನು ಘೋಷಿಸಿ ಶಾಂತಿ ಸಮೃದ್ಧಿ ನೆಲೆಸುವಂತೆ ಸಹಾಯಕವಾಗುವುದೇ ಗಾಂಧೀಜಿಯವರ ರಚನಾತ್ಮಕ ಕಾರ್ಯಗಳ ಉದ್ದೇಶವಾಗಿತ್ತು. ಸತ್ಯ ಮತ್ತು ಅಹಿಂಸೆಯಿಂದ ಗಳಿಸುವುದೇ ಸ್ವಾತಂತ್ರ್ಯ. ಅದು ರಚನಾತ್ಮಕ ಕಾರ್ಯಗಳ ಹೊರತಾಗಿ ಬರಲು ಸಾಧ್ಯವೇ ಇಲ್ಲ ಎಂಬುದು ಗಾಂಧೀಜಿಯವರ ನಂಬಿಕೆ. ಸಂಪೂರ್ಣ ಸ್ವಾತಂತ್ರ್ಯ ಗಳಿಸಲು ರಚನಾತ್ಮಕ ಕಾರ್ಯಗಳು ಅಗತ್ಯ ಮತ್ತು ಅನಿವಾರ್ಯ. ರಚನಾತ್ಮಕ ಕಾರ್ಯಗಳ ರೂಪರೇಷಗಳು ಬಹಳ ವಿಶಾಲವಾದವು. ಗಾಂಧೀಜಿಯವರ ರಚನಾತ್ಮಕ ಕಾರ್ಯಗಳ ಅಡಿಯಲ್ಲಿ ಖಾದಿ ಮತ್ತು ಗ್ರಾಮೋದ್ಯೋಗ, ಅಸ್ಪೃಶ್ಯತಾ ನಿವಾರಣೆ, ಗೋ ಸಂರಕ್ಷಣೆ, ಹಿಂದಿ ಪ್ರಚಾರ ಶುಚಿತ್ವ ಮತ್ತು ಆರೋಗ್ಯ, ಆರ್ಥಿಕ ಸಮಾನತೆ, ಹಿಂದು ಮುಸ್ಲಿಂ ಐಕ್ಯತೆ, ಪಾನನಿರೋಧ, ಮೂಲಶಿಕ್ಷಣ, ಸ್ತ್ರೀಯರ ಏಳಿಗೆ ಇವು ಬಹಳ ಪ್ರಮುಖವಾದವುಗಳಾಗಿವೆ. ಇವುಗಳಲ್ಲಿ ಕೆಲವು ನಮ್ಮ ದೇಶದ ಜನತೆಯ ಸಮಸ್ಯೆಗಳನ್ನು ಬಗೆಹರಿಸಿದರೆ ಖಾದಿ ಮತ್ತು ಗ್ರಾಮೋದ್ಯೋಗ, ಮೂಲ ಶಿಕ್ಷಣ ಇವು ಇಡೀ ಮಾನವ

ಕೋಟಿಗೆ ಯೋಗ್ಯವಾಗಿವೆ. ಅಹಿಂಸಾ ಹೋರಾಟದಲ್ಲಿ ಪೂರ್ವಸಿದ್ಧತೆ ಅಗತ್ಯ. ಆದ್ದರಿಂದ ಈ ರಚನಾತ್ಮಕ ಕಾರ್‍ಯಗಳು ಪೂರ್ವಸಿದ್ಧತೆಗೆ ತಳಹದಿಯಾಗಿವೆ. ಗಾಂಧೀಜಿಯವರು ಕರ್ನಾಟಕಕ್ಕೆ ಬಂದಾಗಲೆಲ್ಲಾ ಖಾದಿ ಮತ್ತು ಗ್ರಾಮೋದ್ಯೋಗ, ಅಸ್ಪೃಶ್ಯತಾ ನಿವಾರಣೆ, ಹಿಂದೂ ಮುಸ್ಲಿಂ ಐಕ್ಯತೆ, ಗ್ರಾಮ ನೈರ್ಮಲ್ಯ ಮುಂತಾದ ರಚನಾತ್ಮಕ ಕಾರ್ಯಗಳ ಕುರಿತೇ ಮಾತನಾಡುತ್ತಿದ್ದರು. ಇದರಿಂದಾಗಿಯೂ ಸಹ ಜನತೆ ರಚನಾತ್ಮಕ ಕಾರ್ಯಗಳಿಗೆ ಹೆಚ್ಚಿನ ಪ್ರಾಶಸ್ತ್ಯ ನೀಡಲಾರಂಭಿಸಿದರು.

೧೯೨೦ ನಂತರ ಕರ್ನಾಟಕದಲ್ಲಿಯೂ ಸಹ ಗಾಂಧಿಯುಗ ಆರಂಭವಾಯಿತು.[೨] ನಾಗಪುರ ಕಾಂಗ್ರೆಸ್ ಅಧಿವೇಶನದಲ್ಲಿ ಅಖಿಲ ಭಾರತ ರಾಷ್ಟ್ರೀಯ ಕಾಂಗ್ರೆಸ್ ಭಾಷೆಯ ಆಧಾರದ ಮೇಲೆ ಇಪ್ಪತ್ತೊಂದು ಪ್ರಾಂತೀಯ ಕಾಂಗ್ರೆಸ್‌ಗಳ ಅಸ್ತಿತ್ವಕ್ಕೆ ಅನುಮತಿಯನ್ನು ನೀಡಿತು. ಆದರೆ ರಾಷ್ಟ್ರೀಯ ಕಾಂಗ್ರೆಸ್ ಪ್ರಾಂತ್ಯಗಳ ರಾಜಕೀಯದಲ್ಲಿ ಮಧ್ಯ ಪ್ರವೇಶಿಸುವುದಿಲ್ಲವೆಂದು, ಪ್ರಾಂತ್ಯಗಳು ರಚನಾತ್ಮಕ ಕಾರ್ಯಗಳ ಅಡಿಯಲ್ಲಿ ತಮ್ಮ ಗುರಿ ಸಾಧಿಸಿಕೊಳ್ಳಬೇಕೆಂದು ಸೂಚನೆಯನ್ನು ನೀಡಿತು. ಈ ನಿಟ್ಟಿನಲ್ಲಿ ಕರ್ನಾಟಕದಲ್ಲಿ ಜಿಲ್ಲಾ ಕಾಂಗ್ರೆಸ್ ಸಮಿತಿಗಳು ಜನ್ಮ ತಾಳಿದವು. ತುಮಕೂರು ಜಿಲ್ಲಾ ಕಾಂಗ್ರೆಸ್ ಕೆ.ರಂಗ್ಯಯ್ಯಂಗಾರ್ ಅವರ ನೇತೃತ್ವದಲ್ಲಿ ಹುಟ್ಟಿಕೊಂಡು ರಚನಾತ್ಮಕ ಕಾರ್ಯಗಳನ್ನು ಕೈಗೊಂಡಿತ್ತು. ಮೈಸೂರು ಜಿಲ್ಲಾ ಕಾಂಗ್ರೆಸ್ ಸಮಿತಿಯು ಬೆಂಗಳೂರಿನಲ್ಲಿ ಸಭೆ ಸೇರಿ ರಚನಾತ್ಮಕ ಕಾರ್ಯಕ್ರಮಗಳನ್ನು ಸ್ವೀಕರಿಸುವ ಹಾಗೂ ಸ್ವದೇಶಿ ತತ್ವವನ್ನು ಪ್ರಚಾರ ಮಾಡುವ ಅಂಶಗಳನ್ನು ಅಂಗೀಕರಿಸಿತ್ತು. ೧೯೨೪ರಲ್ಲಿ ಗಾಂಧೀಜಿಯವರ ಅಧ್ಯಕ್ಷತೆಯಲ್ಲಿ ನಡೆದ ಬೆಳಗಾಂ ಕಾಂಗ್ರೆಸ್ ಅಧಿವೇಶನವು ರಚನಾತ್ಮಕ ಕೆಲಸಗಳ ಕಲ್ಪನೆಯನ್ನು ಸಂಪೂರ್ಣವಾಗಿ ಸ್ಪಷ್ಟಪಡಿಸಿತು. ಈ ವೇಳೆಗಾಗಲೆ ಕರ್ನಾಟಕದ ಜನತೆ ರಚನಾತ್ಮಕ ಕಾರ್ಯಗಳಿಗೆ ಸಾಕಷ್ಟು ಸ್ಪಂದಿಸಿದ್ದರು. ಗಾಂಧಿಯುಗದ ಆರಂಭದ ವರ್ಷಗಳಲ್ಲೇ ತಗಡೂರು ರಾಮಚಂದ್ರರಾಯರು, ಕುದ್ಮಲ್ ರಂಗರಾಯರು ಇವರ ಪ್ರಯತ್ನದಿಂದಲೇ ಖಾದಿಗೆ ಭದ್ರ ಬುನಾದಿಯನ್ನು ಹಾಕಲಾಗಿತ್ತು. ಮುಂದೆ ಸಂಸ್ಥಾನದ ಸರ್ಕಾರವೇ ಬದನವಾಳದಲ್ಲಿ ಖಾದಿ ಕೇಂದ್ರವನ್ನು ತೆರೆಯಿತು. ೧೯೨೭ರಲ್ಲಿ ಗಾಂಧೀಜಿಯವರು ನ್ಯಾಷನಲ್ ಹೈಸ್ಕೂಲ್‌ನ ಮೈದಾನದಲ್ಲಿ ದಕ್ಷಿಣ ಭಾರತ ಖಾದಿ ಪ್ರದರ್ಶನವನ್ನು ಉದ್ಘಾಟಿಸಿದರು. ಇದರಿಂದಾಗಿಯೂ ಸಹ ಖಾದಿ ಕೇಂದ್ರಗಳು ಜನ್ಮ ತಾಳಿದವು.

ಜಿಲ್ಲೆಯ ಕಾಂಗ್ರೆಸ್ಸಿಗರಾದ ಕೆ.ರಂಗ್ಯಯ್ಯಂಗಾರ್, ಮಾಲಿಮರಿಯಪ್ಪ, ಆರ್.ಚನ್ನಿಗರಾಮಯ್ಯ, ಸಿ.ಟಿ.ಹನುಮಂತಯ್ಯ, ನೀಲಕಂಠರಾವ್, ಟಿ.ತಾರೇಗೌಡ, ಕೆ.ವಿ.ಸುಬ್ರಮಣಿಸ್ವಾಮಿ ಮುಂತಾದವರು ಗಾಂಧೀಜಿಯವರ ರಚನಾತ್ಮಕ ಕಾರ್ಯಗಳಲ್ಲಿ ಹೆಚ್ಚಿನ ನಂಬಿಕೆ ಇಟ್ಟಿದ್ದು ಖಾದಿ ಗ್ರಾಮೋದ್ಯೋಗ ಪಾನ ನಿರೋಧ, ದಲಿತೋದ್ಧಾರ, ಹಿಂದು ಮುಸ್ಲಿಂ ಐಕ್ಯತೆ, ಗೋಸಂರಕ್ಷಣೆ, ಹಿಂದಿ ಪ್ರಚಾರ ಇವುಗಳ ಯಶಸ್ಸಿಗೆ ಅವಿರತವಾಗಿ ಶ್ರಮಿಸಿದ್ದಾರೆ. ರಚನಾತ್ಮಕ ಕಾರ್ಯಗಳಲ್ಲಿ ಖಾದಿ ಪ್ರಚಾರ ಕಾರ್ಯ ಜಿಲ್ಲೆಯಲ್ಲಿ ಬಹಳ ಬಿರುಸಿನಿಂದ ನಡೆಯಿತು. ಖಾದಿ ಎಂದರೆ ಒಂದು ರೀತಿಯಲ್ಲಿ ಸ್ವದೇಶಿ ಮನೋಭಾವ, ಭಾರತೀಯ ಏಳಿಗೆಯ ಮತ್ತು ಸಹಬಾಳ್ವೆಯ ಸಂಕೇತ. ಖಾದಿಯ ಅಂದೋಲನದಿಂದಾಗಿ ಅನೇಕರಿಗೆ ಊಟ, ಬಟ್ಟೆ ದೊರೆತಿದೆ.

ರಾಜಕೀಯ ಸ್ವಾತಂತ್ರ್ಯಕ್ಕೆ ಸ್ವಾವಲಂಬನೆಯು ಅಗತ್ಯ. ರಾಷ್ಟ್ರವಾದವಿಲ್ಲದ ರಾಜಕೀಯ ಪರಿಪೂರ್ಣವಾಗುವುದಿಲ್ಲ ಎಂಬ ಅರಿವಿನಿಂದ ಜಿಲ್ಲೆಯಲ್ಲಿ ಸ್ವದೇಶಿ ಮತ್ತು ಖಾದಿ ಪ್ರಚಾರ ಕಾರ್ಯಗಳು ನಡೆದವು.

೧೯೩೭ರಲ್ಲಿ ಗಾಂಧೀಜಿಯವರು ಖಾದಿ ಪ್ರವಾಸ ಕೈಗೊಂಡಾಗ ತುಮಕೂರಿಗೂ ಬಂದಿದ್ದರು. ಈ ವೇಳೆಗಾಗಲೇ ತುಮಕೂರಿನ ಸಭೆಗೆ ಆಗಮಿಸಿದ್ದ ನಾಗರಿಕರು ಸಾಕಷ್ಟು ಖಾದಿಯನ್ನು ಧರಿಸಿದ್ದರು. ಜಿಲ್ಲೆಯ ನಾಗರಿಕರು ಎರಡು ಸಾವಿರದ ಇನ್ನೂರ ಇಪ್ಪತ್ತು ರೂಪಾಯಿಗಳನ್ನು ವಿದ್ಯಾರ್ಥಿಗಳು ಮತ್ತು ಉಪಾಧ್ಯಾಯರು ಸೇರಿ ಇನ್ನೂರೈವತ್ತು ರೂಪಾಯಿಗಳ ನಿಧಿಯನ್ನು ಸಲ್ಲಿಸಿದ್ದರು.[೩] ಜಿಲ್ಲೆಯ ಕಾಂಗ್ರೆಸ್ ನಾಯಕರು ಸಭೆಗಳನ್ನು ಏರ್ಪಡಿಸಿ, ಪ್ರಮುಖ ನಾಯಕರಾದ ಟಿ.ಸಿದ್ಧಲಿಂಗಯ್ಯ, ಎಂ.ಎನ್.ಜೋಯಿಸ್, ಕೆ.ಟಿ.ಭಾಷ್ಯಂ, ಎಸ್.ಸಿ.ತಿಮ್ಮಾರೆಡ್ಡಿ ಮುಂತಾದವರನ್ನು ಕರೆಯಿಸಿ ರಚನಾತ್ಮಕ ಕಾರ್ಯಗಳನ್ನು ಕುರಿತಾದ ಉಪನ್ಯಾಸಗಳನ್ನು ಕೊಡಿಸುತ್ತಿದ್ದರು. ಇದರಿಂದಾಗಿ ಜನತೆಯಲ್ಲಿ ರಚನಾತ್ಮಕ ಕಾರ್ಯಗಳ ಬಗ್ಗೆ ಅರಿವು ಮೂಡುತ್ತಿತ್ತು. ೧೯೩೯ರ ವೇಳೆಗೆ ಜಿಲ್ಲೆಯಲ್ಲಿ ಖಾದಿ ಅಂದೋಲನ ತುಂಬ ಬಿರುಸಿನಿಂದ ನಡೆಯಿತು. ೧೯೩೯ರ ಅಕ್ಟೋಬರ್ ೨ರಂದು ಅಖಿಲ ಭಾರತ ಚರಕಾ ಸಂಘದವರು ತುಮಕೂರಿನಲ್ಲಿ ಖಾದಿ ವಸ್ತ್ರಾಲಯವನ್ನು ಸ್ಥಾಪಿಸಿದರು. ನೀಲಕಂಠರಾಯರು ಇದರ ಜವಾಬ್ದಾರಿಯನ್ನೊತ್ತು ಅದನ್ನು ಸ್ವಾತಂತ್ರ್ಯ ಹೋರಾಟದ ಒಂದು ಭಾಗವೆಂದೇ ಮುನ್ನಡೆಸಿದರು. ಮುಂದಿನ ದಿನಗಳಲ್ಲಿ ಈ ಖಾದಿವಸ್ತ್ರಾಲಯವೇ ಸ್ವಾತಂತ್ರ್ಯ ಹೋರಾಟದ ಕೇಂದ್ರವಾಗಿತ್ತು. ಇಲ್ಲಿ ನೀಲಕಂಠರಾಯರ ಸಹಾಯದಿಂದ ಜಿಲ್ಲೆಯಲ್ಲಿ ತಿಪಟೂರು, ಕೊರಟಗೆರೆ, ಮಧುಗಿರಿ, ಪಾವಗಡ, ಮಿಡಿಗೇಶಿ, ಇಟಗದಿಬ್ಬನಹಳ್ಳಿ, ಶಿರಾ ಇನ್ನು ಕೆಲವು ಕಡೆಗಳಲ್ಲಿ ಸಣ್ಣ ಸಣ್ಣ ಖಾದಿ ಕೇಂದ್ರಗಳನ್ನು ತೆಗೆಯಲಾಯಿತು.[೪] ಖಾದಿ ಕೇಂದ್ರಗಳ ಮಾಲೀಕರ ಸಹಾಯದಿಂದ ಖಾದಿ ಬಜಾರುಗಳು ನಿರ್ಮಾಣಗೊಂಡವು. ಖಾದಿ ಮತ್ತು ಸ್ವದೇಶಿ ವಸ್ತುಗಳ ಪ್ರಚಾರ ವೈಭವದಿಂದ ನಡೆಯುತ್ತಿತ್ತು. ಅಂಗಡಿಯ ಮಾಲೀಕರು ಒಪ್ಪದಿದ್ದರೆ ಅಂತಹವರ ಅಂಗಡಿಗಳ ಮುಂದೆ ಪಿಕೆಟಿಂಗ್ ನೆಡೆಸಿದರು. ಕಾರ್ಯಕರ್ತರು ಪೊಲೀಸದಿಂದ ಲಾಠಿ ಏಟು, ಬೂಟು ಕಾಲಿನಿಂದ ಹೊಡೆತ, ಇನ್ನು ಹಲವು ರೀತಿಯ ಅಮಾನವೀಯ ಹಿಂಸೆಗಳನ್ನು ಅನುಭವಿಸಿದರೂ ಸಹ 'ಖಾದಿ ತೊಡಿ ವಿದೇಶಿ ಬಿಡಿ' ಎಂಬ ಘೋಷಣೆಗಳಿಂದ, ಮನೆ ಮನೆಗೂ ಹೋಗಿ ಖಾದಿಯ ಬಳಕೆಯನ್ನು ವ್ಯಾಪಕಗೊಳಿಸಿದರು. ಗಾಂಧಿ ಜಯಂತಿ ಪ್ರಯುಕ್ತ ಸಂಸ್ಥಾನಗಳಲ್ಲಿ ಖಾದಿಯ ಮಾರಾಟ ಕಾರ್ಯವನ್ನು ಹಮ್ಮಿಕೊಳ್ಳಲಾಗಿ, ತುಮಕೂರಿನಲ್ಲಿ ನಾಲ್ಕು ನೂರ ತೊಂಬತ್ತೆರಡು ರೂಪಾಯಿ ಖಾದಿಯನ್ನು ಮಾರಾಟ ಮಾಡಲಾಯಿತು. ಮಧುಗಿರಿಯಲ್ಲಿ ದಿನಾಂಕ ೨೧.೧೦.೧೯೪೬ರಂದು ಹೈಸ್ಕೂಲ್ ಮೈದಾನದಲ್ಲಿ ಮಾಲಿ ಮರಿಯಪ್ಪ ಮತ್ತು ಚನ್ನಿಗರಾಮಯ್ಯ ಅವರ ಅಧ್ಯಕ್ಷತೆಯಲ್ಲಿ ಚರಕಾ ಪ್ರಾರಂಭೋತ್ಸವ ನಡೆಯಿತು. ಜೊತೆಗೆ ಅಂದಿನ ಮೈಸೂರು ಸರ್ಕಾರವು ಸಹ ಖಾದಿ ಮತ್ತು ಗ್ರಾಮೋದ್ಯೋಗಗಳಂತಹ ರಚನಾತ್ಮಕ ಕಾರ್ಯಗಳಿಗೆ ವಿಶೇಷವಾದ ಆಸಕ್ತಿಯನ್ನು ತೋರಿಸಿದ್ದರಿಂದ ಖಾದಿ ಮತ್ತು ಸ್ವದೇಶಿ ಗ್ರಾಮದ್ಯೋಗಗಳು ಹೆಚ್ಚು ಹೆಚ್ಚು ಯಶಸ್ವಿಯಾದವು ಎಂದು ಹೇಳಬಹುದು.

ಗಾಂಧೀಜಿಯವರು ಖಾದಿಯಷ್ಟೇ ಮಹತ್ವದ ಸ್ಥಾನವನ್ನು ಗ್ರಾಮ ಕೈಗಾರಿಕೆಗಳಿಗೂ ಸಹ ನೀಡಿದ್ದಾರೆ. ಖಾದಿ ಇಲ್ಲದೆ, ಗ್ರಾಮ ಕೈಗಾರಿಕೆಗಳು ನಿಲ್ಲಲಾರವು. ರಾಟೆಗೆ ತವರು ಮನೆ ಹಳ್ಳಿಗಳು ೧೯೨೦ರ ದಶಕದಲ್ಲಿ ಜಿಲ್ಲೆಯು ಗೃಹ ಕೈಗಾರಿಕೆಗಳಿಗೆ ಪ್ರಸಿದ್ಧಿ ಪಡೆದಿತ್ತು. ಪಾವಗಡ, ಕೊರಟಗೆರೆ, ತಾಲ್ಲೂಕುಗಳು ಗಾಜಿನ ಬಳೆಯ ಗೃಹ ಉದ್ಯಮಕ್ಕೆ, ತಿಪಟೂರು ಎತ್ತಿಗಾಡಿ ತಯಾರಿಕೆಗೂ, ಶಿರಾ ದೇಶಿಯವಾಗಿ ತಯಾರಿಸಿದ ಬೂಟುಗಳಿಗೂ, ಸೀತಕಲ್ಲು ಮತ್ತು ಊರ್ಡಿಗೆರೆಗಳು ಹಿತ್ತಾಳೆ ಸಾಮಾನುಗಳ ಉದ್ಯಮಕ್ಕೂ, ಜನಪ್ರಿಯತೆ ಗಳಿಸಿದ್ದವು. ಸ್ವಾತಂತ್ರ್ಯನಂತರ ತುಮಕೂರು ಜಿಲ್ಲಾ ಖಾದಿ ಮತ್ತು ಗ್ರಾಮದ್ಯೋಗ ಸಹಕಾರ ಸಂಘ ೧೯೫೨ರಲ್ಲಿ ಜನ್ಮ ತಾಳಿತು. ವರ್ಷಕ್ಕೆ ಸುಮಾರು ೫೦.೦೦೦ ರೂ. ಬೆಲೆ ಬಾಳುವ ಖಾದಿ ಉತ್ಪನ್ನವನ್ನು ಮಾಡಲಾಗುತ್ತಿತ್ತು. ಗಾಂಧೀಜಿಯವರ ರಚನಾತ್ಮಕ ಕಾರ್ಯಕ್ರಮಗಳಲ್ಲಿ ಇನ್ನೊಂದು ಪ್ರಮುಖವಾದ ಅಂಶ ಅಸ್ಪೃಶ್ಯತಾ ನಿವಾರಣೆ ಅಸ್ಪೃಶ್ಯತಾ ನಿವಾರಣೆ ಸ್ವರಾಜ್ಯಕ್ಕೆ ಅಗತ್ಯ. ಗಾಂಧಿ ಆಗಮನಕ್ಕಿಂತ ಮುಂಚೆಯೇ ಸಂಸ್ಥಾನದಲ್ಲಿ ಹರಿಜನೋದ್ಧಾರದ ಕಾರ್ಯಚಟುವಟಿಕೆಗಳನ್ನು ಕಾಣಬಹುದಿತ್ತು. ೧೯೨೪ರಲ್ಲಿ ಗಾಂಧೀಜಿಯವರು ದಲಿತೋದ್ಧಾರ ಪ್ರವಾಸವನ್ನು ಕೈಗೊಂಡು ಸಂಸ್ಥಾನದ ವಿವಿಧ ಸ್ಥಳಗಳಿಗೆ ಭೇಟಿ ನೀಡಿದ್ದರು. ತುಮಕೂರಿಗೆ ಭೇಟಿ ನೀಡಿದಾಗ ದಲಿತರ ಕೇರಿಗಳಿಗೆ ಭೇಟಿ ನೀಡಿದರು. ಅವರಿಗೆ ಸ್ವಚ್ಛತೆ ಇರಬೇಕು, ಹೆಂಡ ಕುಡಿಯುವುದನ್ನು ನಿಲ್ಲಿಸಬೇಕೆಂದು ಎಲ್ಲರನ್ನು ಕುರಿತು ಮಾತನಾಡಿದರು. ತುಮಕೂರಿನಲ್ಲಿ ಈಗಾಗಲೇ ಆದಿ ಕರ್ನಾಟಕ ವಸತಿ ಮತ್ತು ಔದ್ಯೋಗಿಕ ವಸತಿ ಶಿಕ್ಷಣ ಶಾಲೆಗಳಿದ್ದವು. ಅಲ್ಲಿಗೆ ಭೇಟಿ ನೀಡಿ ಅವರ ಸ್ವಚ್ಛತೆಯನ್ನು ಕೊಂಡಾಡಿದರು. ಅಲ್ಲಿಂದ ಮಧುಗಿರಿ, ಕೊರಟಗೆರೆ, ತಿಪಟೂರು, ಕ್ಯಾತ್ಸಂದ್ರಗಳಿಗೆ ಭೇಟಿ ನೀಡಿದರು. ಆ ಸಂದರ್ಭದಲ್ಲಿ ಮಧುಗಿರಿ ಜನತೆ ದರಿದ್ರ ನಾರಾಯಣ ನಿಧಿಗೆ ಒಂದು ಸಾವಿರ ರೂಪಾಯಿಗಳನ್ನು, ಕೊರಟಗೆರೆಯಲ್ಲಿ ನೂರು ರೂಪಾಯಿ ನಿಧಿಯನ್ನು ಸಲ್ಲಿಸಿದರು. ಜಿಲ್ಲೆಯ ನಾಯಕರು ದಲಿತೋದ್ಧಾರದ ಬಗ್ಗೆ ಬಹಳ ಕಾಳಜಿಯನ್ನು ಹೊಂದಿದ್ದರು. ಮಾಲಿಮರಿಯಪ್ಪ, ಆರ್.ಚನ್ನಿಗರಾಮಯ್ಯ, ಸಿ.ಟಿ.ಹನುಮಂತಯ್ಯ ಇವರು ಸಂಸ್ಥಾನದ ನಾಯಕರನ್ನು ಆಹ್ವಾನಿಸಿ ಉಪನ್ಯಾಸಗಳನ್ನು ಏರ್ಪಡಿಸುತ್ತಿದ್ದರು. ಇದರಿಂದಾಗಿ ಜನತೆಗೆ ದಲಿತೋದ್ಧಾರದ ಬಗ್ಗೆ ತಿಳುವಳಿಕೆಯನ್ನು ಮೂಡಿಸುತ್ತಿದ್ದರು. ಪಾನನಿರೋಧ ರಚನಾತ್ಮಕ ಕಾರ್ಯಗಳಲ್ಲಿ ಒಂದು ಮದ್ಯಪಾನದ ವ್ಯಸನಕ್ಕೆ ತುತ್ತಾದ ರಾಷ್ಟ್ರಕ್ಕೆ ಆತ್ಮನಾಶವಲ್ಲದೆ ಅನ್ಯಗತಿಯಿಲ್ಲ ಎಂಬುದು ಗಾಂಧೀಜಿಯವರ ಅಭಿಪ್ರಾಯ ದಲಿತರ ಅಭಿವೃದ್ಧಿಯಾಗಬೇಕಾದರೆ, ಉತ್ತಮ ನಾಗರಿಕ ವಾತಾವರಣವಿರಬೇಕಾದಲ್ಲಿ, ಬೆಳೆಯುತ್ತಿರುವ ಮಕ್ಕಳ ಗುಣ, ಉತ್ಕೃಷ್ಟರೂಪ ಪಡೆಯಬೇಕಾದಲ್ಲಿ, ಪಾನನಿರೋಧವನ್ನು ಯಶಸ್ವಿಗೊಳಿಸಬೇಕೆಂಬ ನಿಟ್ಟಿನಲ್ಲಿ ಜಿಲ್ಲೆಯಲ್ಲಿ ಈ ಚಳುವಳಿ ಬಹಳ ಬಿರುಸಿನಿಂದ ನಡೆಯಿತು. ಈ ಚಳುವಳಿಯು ಮೈಸೂರು ಸಂಸ್ಥಾನದಲ್ಲೇ ಮೊಟ್ಟ ಮೊದಲ ಬಾರಿಗೆ ೧೯೩೧-೩೨ರಲ್ಲಿ ತುಮಕೂರು ಜಿಲ್ಲೆಯಲ್ಲಿ ಪ್ರಾರಂಭವಾಯಿತು. ಕೆ.ರಂಗ್ಯಯ್ಯಂಗಾರ್, ಟಿ.ಸುಬ್ರಮಣ್ಯ, ಆರ್.ಚನ್ನಿಗರಾಮಯ್ಯ, ಎಂ.ಎಸ್.ವಿನೋಬರಾವ್ ಅವರ ನಾಯಕತ್ವದಲ್ಲಿ ನಡೆಯಿತು. ಗೋಸಂರಕ್ಷಣೆಯು ಗಾಂಧೀಜಿಯವರ ರಚನಾತ್ಮಕ ಕಾರ್ಯಗಳಲ್ಲಿ ಒಂದಾಗಿದೆ. ಜಿಲ್ಲೆಯ ಜನತೆ ಈ ವಿಧಾಯಕ ಕಾರ್ಯಕ್ಕೆ ಹೆಚ್ಚಿನ ಮಹತ್ವ ನೀಡಿದರು. ಕೆ.ರಂಗಯ್ಯಂಗಾರ್, ಎಸ್.ಕಾಮರಾಜಪ್ಪ, ಹೆಚ್.ಎಂ.ಗಂಗಾಧರಯ್ಯ, ಆರ್.ಚನ್ನಿಗರಾಮಯ್ಯ,

ಕೆ.ಎಸ್.ರಾಜಪ್ಪನವರು ಗೋ ಸಂರಕ್ಷಣಾ ಕಾರ್ಯದಲ್ಲಿ ತೊಡಗಿದ್ದರು. ೧೯೨೭ರಲ್ಲಿ ಪ್ರಾಣಿದಯಾ ಪ್ರಚಾರ ಸಂಘವನ್ನು ತುಮಕೂರಿನಲ್ಲಿ ಸ್ಥಾಪಿಸಿದರು. ಇವರು ಗೋಹತ್ಯೆಯನ್ನು ನಿಷೇಧಿಸಲು ಜಿಲ್ಲೆಯಲ್ಲಿ ಸಾರ್ವಜನಿಕ ಸಭೆಗಳನ್ನು ಏರ್ಪಡಿಸಿ ಗೋ ಸಂರಕ್ಷಣೆಯ ಬಗ್ಗೆ ಅರಿವು ಮೂಡಿಸುತ್ತಿದ್ದರು. ಡಿ.ಎನ್.ಶಾಮರಾಜಪ್ಪನವರು ಗೋಧರ್ಮ ಶಾಲೆಯನ್ನು ಪ್ರಾರಂಭಿಸಿ ಗೋರಕ್ಷಣಾ ಕಾರ್ಯದಲ್ಲಿ ತೊಡಗಿದ್ದರು. ೧೯೨೭ರಲ್ಲಿ ಗಾಂಧೀಜಿಯವರು ಖಾದಿ ಪ್ರಚಾರ ಕಾರ್ಯ ನಿಮಿತ್ತವಾಗಿ ತುಮಕೂರಿಗೆ ಭೇಟಿ ನೀಡಿದಾಗ ಊರಿಗೊಂದು ಗೋಶಾಲೆಯನ್ನು ನಡೆಸಬೇಕು ಗೋಮಾಂಸ ಭಕ್ಷಿಸುವುದನ್ನು ನಿಲ್ಲಿಸಬೇಕೆಂದು ಮಾತನಾಡಿದರು. ಈ ಪೀಳಿಗೆಗಾಗಲೇ ಸ್ಥಾಪಿತವಾದ ಪ್ರಾಣಿದಯಾ ಪ್ರಚಾರಕ ಸಂಘ ದವರು ಗೋಸಂರಕ್ಷಣೆಗಾಗಿ ೨೦೦ ರೂಪಾಯಿಗಳ ನಿಧಿಯನ್ನು ಅರ್ಪಿಸಿದರು. ಗೋಸಂರಕ್ಷಣಾ ಕಾರ್ಯದ ಅಂಗವಾಗಿ ಜಿಲ್ಲೆಯಲ್ಲಿ ಹಲವಾರು ದಾನಿಗಳು ಪಶುವೈದ್ಯಶಾಲೆಗಳಿಗೆ ದಾನ ನೀಡಿದ್ದಾರೆ. ಹಿಂದು ಮುಸ್ಲಿಂ ಐಕ್ಯತೆ ಸ್ವರಾಜ್ಯ ಪ್ರಾಪ್ತಿಗೆ ಅಗತ್ಯವಾದುದು. ಜಿಲ್ಲೆಯಲ್ಲಿ ತುಮಕೂರು ಜಿಲ್ಲಾ ಕಾಂಗ್ರೆಸ್ ವತಿಯಿಂದ ಸಾಮಾಜಿಕ ಸಭೆಯನ್ನು ಏರ್ಪಡಿಸಿ ಅರಿವು ಮೂಡಿಸುತ್ತಿದ್ದರು. ೧೯೩೨ ಜನವರಿ ೨೯ರಂದು ಸಾರ್ವಜನಿಕ ಸಭೆಯನ್ನು ಏರ್ಪಡಿಸಿದರು. ಆ ಸಭೆಯಲ್ಲಿ ಗುಬ್ಬಿ ಹುಚ್ಚಪ್ಪ, ನೆಟ್ಟೂರ ಪುಟ್ಟಮುದ್ದಯ್ಯ, ಗಫಾರ್‌ಖಾನ್ ಇವರು ಹಿಂದು-ಮುಸ್ಲಿಂ ಐಕ್ಯತೆ ಭಾವನೆಯನ್ನು ಸಾರಿ ಸ್ವರಾಜ್ಯ ಪ್ರಾಪ್ತಿಗೆ ಪ್ರಯತ್ನ ನಡೆಸಬೇಕೆಂದು ತಿಳಿಸಿದರು. ಗಾಂಧೀಜಿಯವರು ರೂಪಿಸಿದ ರಚನಾತ್ಮಕ ಕಾರ್ಯಗಳಲ್ಲಿ ಹಿಂದಿ ಪ್ರಚಾರವು ಒಂದಾಗಿತ್ತು. ತುಮಕೂರು ಜಿಲ್ಲೆಯಲ್ಲಿ ಈ ಅಂಶದ ಬಗ್ಗೆ ಪ್ರಚಾರ ಕೈಗೊಂಡ ಕಾಂಗ್ರೆಸ್ಸಿಗರೆಂದರೆ, ಬಿ.ಸಿ.ನಂಜುಂಡಯ್ಯ, ಟಿ.ಸುಬ್ರಮಣ್ಯಂ, ಕೆ.ರಂಗಯ್ಯಂಗಾರ್, ಜಿ.ವಿ.ನಾರಾಯಣಮೂರ್ತಿ, ೧೯೩೦-೩೭ರ ಅವಧಿಯಲ್ಲಿ ಕೆಲವು ಶ್ರದ್ಧಾಳುಗಳ ಪರಿಶ್ರಮದ ಫಲವಾಗಿ ಹಿಂದಿ ಪ್ರಚಾರವು ಜಿಲ್ಲೆಯಲ್ಲಿ ನಡೆಯಿತು. ಹಿಂದಿ ಪ್ರಚಾರದ ನಿಮಿತ್ತವಾಗಿ 'ವೀರಅಭಿಮನ್ಯು' ಮತ್ತು 'ಮೇವಾಡದ' ಪತನ ಎಂಬ ಹಿಂದಿ ನಾಟಕಗಳನ್ನು ಹಿಂದಿ ಭಾಷೆಯಲ್ಲಿ ಪ್ರದರ್ಶಿಸಿದರು. ತುಮಕೂರಿನಲ್ಲಿ ೧೯೪೫ರ ಅಕ್ಟೋಬರ್‌ನಲ್ಲಿ ಹಿಂದಿ ಪ್ರಚಾರ ಸಮಿತಿ ಸ್ಥಾಪನೆಯಾಯಿತು. ಬಿ.ಸಿ.ನಂಜುಂಡಸ್ವಾಮಿಯವರು ಅಧ್ಯಕ್ಷರಾಗಿ ಸೇವೆ ಸಲ್ಲಿಸಿದರು. ಈ ಸಮಿತಿಯವರು ಪ್ರತಿವರ್ಷ ಜಿ.ವಿ.ನಾರಾಯಣಮೂರ್ತಿಯವರನ್ನು ಆಹ್ವಾನಿಸಿ ಹಿಂದಿಯಲ್ಲಿ ಉಪನ್ಯಾಸಗಳನ್ನು ಏರ್ಪಡಿಸುತ್ತಿದ್ದರು. ಹಿಂದಿ ಪ್ರಚಾರ ಸಮಿತಿಯು ೧೯೭೯ರಲ್ಲಿ ರಜತಮಹೋತ್ಸವವನ್ನು ಆಚರಿಸಿತು.[೬] ರಾಷ್ಟ್ರೀಯ ಶಿಕ್ಷಣವು ಗಾಂಧೀಜಿಯವರ ರಚನಾತ್ಮಕ ಕಾರ್ಯಗಳಲ್ಲಿ ಒಂದಾಗಿತ್ತು. ರಾಷ್ಟ್ರೀಯ ಶಿಕ್ಷಣದ ಅಂಗವಾಗಿ ಜಿ.ವಿ.ನಾರಾಯಣಮೂರ್ತಿಯವರು ೧೯೪೩ರಲ್ಲಿ ದೇಶೀಯ ವಿದ್ಯಾಪೀಠ ಸ್ಥಾಪಿಸಿ, ೧೯೪೪ರ ಜೂನ್ ೨ರಂದು ಇದರ ಅಂಗವಾಗಿ ಪ್ರೌಢಶಾಲೆಯನ್ನು ಆರಂಭಿಸಿದರು. ಈ ಶಾಲೆಯಲ್ಲಿ ಅಧ್ಯಾಪಕರಾದ ಜಿ.ಪ.ಈಶ್ವರನ್ ಮತ್ತು ಜಿ.ನ.ಕೃಷ್ಣರಾವ್ ಅವರು ವಿದ್ಯಾಪೀಠದ ಪ್ರಗತಿಗಾಗಿ ಸೇವೆ ಸಲ್ಲಿಸಿದರು. ಇಲ್ಲಿ ಕವಾಯಿತು, ಹಿಂದೀ ಪ್ರಚಾರ, ರಾಷ್ಟ್ರಗೀತೆಗಳ ಅಭ್ಯಾಸ, ಖಾದಿ ಪ್ರಚಾರ, ದಲಿತೋದ್ಧಾರ ಮುಂತಾದ ರಚನಾತ್ಮಕ ಕಾರ್ಯಕ್ರಮಗಳಿಂದ ಒಂದು ಹೊಸ ತತ್ವವೇ ಮೂಡತೊಡಗಿತು. ಹೀಗೆ ಜಿಲ್ಲೆಯಲ್ಲಿ ರಚನಾತ್ಮಕ ಕಾರ್ಯಗಳನ್ನು ಕಾರ್ಯರೂಪಕ್ಕೆ ತರುವುದರಲ್ಲಿ ಅಗ್ರಸ್ಥಾನ ಪಡೆದುಕೊಂಡಿದೆ.

ಚನ್ನಿಗರಾಮಯ್ಯನವರು ಸಹ ಮಹಾತ್ಮರ ರಚನಾತ್ಮಕ ಕಾರ್ಯಗಳನ್ನು ನಿರ್ವಹಿಸಬೇಕೆಂಬ ಅದಮ್ಯ ಉತ್ಸಾಹ ಹೊಂದಿದ್ದವರು. ಗಾಂಧೀಜಿಯವರ ಸ್ಫೂರ್ತಿಯಿಂದ ಸಂಪೂರ್ಣ ಖಾದಿಧಾರಿಗಳಾಗಿದ್ದರು. ಇಡೀ ಜಿಲ್ಲೆಯಾದ್ಯಂತ ಸಂಚರಿಸಿ ದಲಿತ ಸಮುದಾಯದಲ್ಲಿ ಜಾಗೃತಿ ಉಂಟುಮಾಡಿದರು. ದೇವದಾಸಿ ಪದ್ಧತಿ, ಬಾಲ್ಯವಿವಾಹ, ಗೋಹತ್ಯೆ, ಮದ್ಯಪಾನ ಮುಂತಾದವುಗಳನ್ನು ತ್ಯಜಿಸುವಂತೆ, ಆ ಮೂಲಕ ಸುಶಿಕ್ಷಿತರಾಗುವಂತೆ ಕರೆ ನೀಡಿದರು. ಸಾರ್ವಜನಿಕ ಸ್ಥಳಗಳಾದ ದೇವಸ್ಥಾನ, ಕುಡಿಯುವ ನೀರು, ಬಾವಿಗಳ ಪ್ರವೇಶ ಮಾಡುವುದಕ್ಕೆ ನಿಷಿದ್ಧಗೊಳಿಸಿದ್ದನ್ನು ತೀವ್ರವಾಗಿ ಪ್ರತಿಭಟಿಸಿ ಸಾರ್ವಜನಿಕ ಸ್ಥಳಗಳಿಗೆ ದಲಿತರಿಗೆ ಪ್ರವೇಶ ಕಲ್ಪಿಸಿದ ಸಾಕಾರಮೂರ್ತಿಯಾಗಿದ್ದರು. ದೀನ ದಲಿತರ ಅಭಿವೃದ್ಧಿಗೆ ಸದಾ ಚಿಂತಿಸುತ್ತಿದ್ದರು. ಅಸ್ಪೃಶ್ಯತೆಯ ನಿರ್ಮೂಲನೆ ಮಾಡಲು ಸಂಪೂರ್ಣವಾಗಿ ತೊಡಗಿಕೊಂಡು ಗಾಂಧೀಜಿಯವರ ತತ್ವ ಸಿದ್ಧಾಂತಗಳನ್ನು ರಚನಾತ್ಮಕ ಕಾರ್ಯಗಳನ್ನು ಅನುಷ್ಠಾನಗೊಳಿಸಲು ಪ್ರಯತ್ನಿಸಿದರು.

### ೩.೨. ಕ್ವಿಟ್ ಇಂಡಿಯಾ ಚಳುವಳಿ

ರಾಜಕೀಯ ಸ್ವಾತಂತ್ರ್ಯ ಗಳಿಸುವ ಸಲುವಾಗಿ ಸಾಮಾಜಿಕ ಸ್ತರದಲ್ಲಿ ಆಂದೋಲನ ಹುಟ್ಟುಹಾಕಿ ಅಹಿಂಸೆ ಎಂಬ ಅಸ್ತ್ರವನ್ನು ಬಳಸಿದ ನಿದರ್ಶನ ಭಾರತ ಬಿಟ್ಟರೆ ಬೇರೆಲ್ಲೂ ಸಿಗದು. ಜನರನ್ನು ಸಮರೋಪಾದಿಯಲ್ಲಿ ಸಜ್ಜುಗೊಳಿಸಿ ಮಾನವ ಸಮುದಾಯದ ಅಂತಃಕರಣವನ್ನು ಕಲಕಿಬಿಟ್ಟ ಗಾರುಡಿಗರೆಂದರೆ ಮಹಾತ್ಮಗಾಂಧೀಜಿಯವರು. ಆತ್ಮಶಕ್ತಿ ನಿಗ್ರಹ, ಅಹಿಂಸೆ, ಅಸಹಕಾರ ಮುಂತಾದ ಮಾರ್ಗೋಪಾಯಗಳಿಂದಲೇ ಬಿಗಿಮುಷ್ಟಿಯ ಬ್ರಿಟಿಷರನ್ನು ಅವರ ದಬ್ಬಾಳಿಕೆ, ದಮನಕಾರಿ ತಂತ್ರಗಳನ್ನು ನಿಶ್ಯಕ್ತಗೊಳಿಸಿದ ಮಹಾನ್ ಆತ್ಮ ಎಂದರೆ ಬಾಪು ಗಾಂಧೀಜಿಯವರು. ನಮ್ಮ ರಾಷ್ಟ್ರವನ್ನು ಪರಕೀಯರ ದಬ್ಬಾಳಿಕೆಯಿಂದ ವಿಮುಕ್ತಗೊಳಿಸುವ ಸಲುವಾಗಿ ಮೂರು ಮುಖ್ಯ ಚಳುವಳಿಗಳನ್ನು ನಡೆಸಿದರು. ಮೊದಲನೆಯದು ಅಸಹಕಾರ ಚಳುವಳಿ, ಎರಡನೆಯದು ಕಾನೂನುಭಂಗ ಚಳುವಳಿ, ಮೂರನೆಯದು ಭಾರತ ಬಿಟ್ಟು ತೊಲಗಿ ಅಥವಾ ಕ್ವಿಟ್ ಇಂಡಿಯಾ ಚಳುವಳಿ. ಈ ಚಳುವಳಿ ದೇಶದ ಪ್ರತಿಯೊಂದು ಭಾಗದಲ್ಲಿಯೂ ಬಹಳ ಬಿರುಸಿನಿಂದ ನಡೆಯಿತು. ೧೯೪೨ರಲ್ಲಿ ಕ್ರಿಪ್ಸ್ ಸಂಧಾನ ವಿಫಲತೆಯ ನಂತರ ಕ್ವಿಟ್ ಇಂಡಿಯಾ ಚಳುವಳಿ ನಡೆಸುವ ನಿರ್ಣಯವನ್ನು ಮಾಡಿದರು. ೧೯೪೨ ಆಗಸ್ಟ್ ೮ರಂದು ಅಖಿಲ ಭಾರತ ಕಾಂಗ್ರೆಸ್ ಸಮಿತಿಯು ಬೊಂಬಾಯಿಯಲ್ಲಿ ಸೇರಿದ ಅಧಿವೇಶನದಲ್ಲಿ ಇತಿಹಾಸ ಪ್ರಸಿದ್ಧ ಕ್ವಿಟ್ ಇಂಡಿಯಾ ಎಂಬ ಎರಡೇ ಪದಗಳಿಂದ ಇಡೀ ದೇಶದ ಜನತೆಯನ್ನು ಹುರಿದುಂಬಿಸಿ ಚಳುವಳಿಯ ದುಂದುಭಿಯನ್ನು ದೇಶಾದ್ಯಂತ ಮೊಳಗಿಸಿದರು. ಅಧಿವೇಶನದ ನಂತರವೇ ಸರ್ಕಾರ ಗಾಂಧಿ, ನೆಹರು ಮತ್ತು ಅಬ್ದುಲ್ ಕಲಾಂ ಅಜಾದ್ ಮುಂತಾದ ಎಲ್ಲಾ ರಾಷ್ಟ್ರೀಯ ನಾಯಕರನ್ನು ಬೊಂಬಾಯಿಯಲ್ಲಿ ಬಂಧಿಸಿತು.[೬] ಮಹಾತ್ಮಗಾಂಧಿ ಮತ್ತು ಇತರೆ ನಾಯಕರ ದಸ್ತಗಿರಿಯ ಸುದ್ದಿ ಕಾಳ್ಗಿಚ್ಚಿನಂತೆ ದೇಶದ ಮೂಲೆ ಮೂಲೆಗೂ ಹರಡಿತು. ಅದೇ ಸಮಯದಲ್ಲಿ ಸರಕಾರದ ಆಡಳಿತ ಯಂತ್ರವು ಕುಸಿದು ಬೀಳುವ ರೀತಿಯಲ್ಲಿ ಚಳುವಳಿಯನ್ನು ಸಂಘಟಿಸಬೇಕು. ಚಳುವಳಿ ಅಹಿಂಸಾತ್ಮಕವಾಗಿರಬೇಕೆಂದು, ಹರಿಜನ ಪತ್ರಿಕೆಯಲ್ಲಿ ಒಂದು ಲೇಖನ ಪ್ರಕಟವಾಯಿತು. ಇದು

ಜನತೆಯ ಮೇಲೆ ಹೆಚ್ಚಿನ ಪ್ರಭಾವವನ್ನು ಬೀರಿತು. ಪರಾಧೀನತೆಯಿಂದ ಮುಕ್ತಿ ಹೊಂದುವ ಸಲುವಾಗಿ ಹಿಮಾಲಯದಿಂದ ಕನ್ಯಾಕುಮಾರಿಯವರೆಗೆ ಭಾರತದ ಜನತೆಯಲ್ಲಿ ದೇಶಾಭಿಮಾನ ಉಕ್ಕಿ ಪ್ರತಿಯೊಬ್ಬ ಸ್ತ್ರೀ-ಪುರುಷರು ಸ್ವಯಂಸೇವಕರಾಗಿ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಧುಮುಕಿದರು. ಗಾಂಧೀಜಿಯವರ 'ಮಾಡು ಇಲ್ಲವೇ ಮಡಿ' ಎಂಬ ಘೋಷಣೆ ಇಡೀ ದೇಶದಲ್ಲೆಲ್ಲಾ ಸ್ಪಂದಿಸಿತು. ಕ್ವಿಟ್ ಇಂಡಿಯಾ ಚಳುವಳಿಯ ಸಂದರ್ಭದಲ್ಲಿ ಜನವಾಣಿ, ವಿಶ್ವ ಕರ್ನಾಟಕ, ತಾಯಿನಾಡು ಮತ್ತು ಪ್ರಜಾಮತ ಪತ್ರಿಕೆಗಳು ಚಳುವಳಿಯನ್ನು ಪ್ರಚಾರ ಮಾಡಿ ಚಳುವಳಿಯ ತೀವ್ರತೆಯನ್ನು ಹೆಚ್ಚಿಸಿದವು.[೮]

ರಾಷ್ಟ್ರನಾಯಕರ ಬಂಧನಕ್ಕೆ ದೇಶದ ಜನತೆ ತೋರಿದ ತೀವ್ರ ಪ್ರತಿಕ್ರಿಯೆಯೊಂದಿಗೆ ಚಳುವಳಿ ಆರಂಭವಾಯಿತು. ನಾಯಕರ ಬಂಧನದಿಂದಾಗಿ ಮೈಸೂರು ಸಂಸ್ಥಾನದ ನಗರಗಳಲ್ಲಿ ಹರತಾಳ ಸಭೆ ಮೆರವಣಿಗೆಗಳು ಆಚರಿಸಲ್ಪಟ್ಟವು. ಆರಂಭದಲ್ಲಿ ಸರಕಾರಿ ವಿರೋಧಿ ಪ್ರಚಾರದೊಂದಿಗೆ ಎಲ್ಲಾ ಜಿಲ್ಲೆಗಳಲ್ಲೂ ಅವು ಒಮ್ಮಿಂದೊಮ್ಮೆಗೆ ಆರಂಭವಾದವು. ಅದರಲ್ಲಿಯೂ ತುಮಕೂರು ಜಿಲ್ಲೆಯ ಜನತೆ ಕ್ವಿಟ್ ಇಂಡಿಯಾ ಚಳುವಳಿಯಲ್ಲಿ ಸಕ್ರಿಯವಾಗಿ ಭಾಗವಹಿಸಿ ತೀವ್ರ ಹೋರಾಟವನ್ನು ನಡೆಸಿತು. ಸರ್ಕಾರದ ವಿರುದ್ಧ ಸರ್ಕಾರದ ಕಟ್ಟಡಗಳ ಮೇಲೆ ಧ್ವಜ ಹಾರಿಸುವುದು, ಮದ್ಯದ ಅಂಗಡಿಗಳ ಮುಂದೆ ಪಿಕೆಟಿಂಗ್, ಸಭೆ ಮೆರವಣಿಗೆಗಳನ್ನು ನಡೆಸುವುದು, ರೈಲ್ವೆ ತಂತಿಗಳನ್ನು ನಾಶ ಮಾಡುವುದು ಇಂತಹ ವಿಧ್ವಂಸಕ ಕೃತ್ಯಗಳು ಈ ಚಳುವಳಿಯ ಮುಖ್ಯಲಕ್ಷಣಗಳಾಗಿದ್ದವು. ಆಗಸ್ಟ್ ಮತ್ತು ಸೆಪ್ಟೆಂಬರ್ ತಿಂಗಳಿನಲ್ಲಿ ಕಾಣಿಸಿಕೊಂಡ ಈ ಅಭೂತಪೂರ್ವ ಗಲಭೆಗಳು ಯಾವುದಾದರೂ ಒಂದೇ ಒಂದು ಪ್ರದೇಶಕ್ಕೆ ಸೀಮಿತವಾಗಿರಲಿಲ್ಲ. ತುಮಕೂರು ಜಿಲ್ಲೆಯ ಮಧುಗಿರಿ, ಕೊರಟಗೆರೆ, ಶಿರಾ, ತಿಪಟೂರು, ಪಾವಗಡ, ಕುಣಿಗಲ್ ಮತ್ತು ಚಿಕ್ಕನಾಯಕನಹಳ್ಳಿ ಮುಂತಾದ ಕಡೆ ಸಾಗಿತು. ಈ ಚಳುವಳಿಯಲ್ಲಿ ಜಿಲ್ಲೆಯ ವಿದ್ಯಾರ್ಥಿಗಳು, ಕಾರ್ಮಿಕರು, ಮಹಿಳೆಯರು ಹೆಚ್ಚು ಹೆಚ್ಚು ಸಂಖ್ಯೆಯಲ್ಲಿ ಭಾಗವಹಿಸಿದರು. ಚಳುವಳಿಗಾರರು ತಮ್ಮ ಹುದ್ದೆಗಳಿಗೆ ರಾಜೀನಾಮೆಯನ್ನು ನೀಡಿ ಸ್ವಪ್ರೇರಣೆಯಿಂದ ಚಳುವಳಿಯಲ್ಲಿ ಸಕ್ರಿಯವಾಗಿ ಪಾಲ್ಗೊಂಡರು. ಆಗಸ್ಟ್ ೯ ರಂದು ಪ್ರಾರಂಭವಾದ ಘಟನೆಗಳ ಪರಾಕಾಷ್ಠೆ ದಿನೇದಿನೇ ಹೆಚ್ಚಾಯಿತು. ಆಗಸ್ಟ್ ೧೦ರಂದು ತುಮಕೂರಿನಲ್ಲಿ ಹರತಾಳ ಆಚರಿಸಿ ಸಭೆ ಸೇರಿದರು. ತಾ.ರಾ.ಸುಬ್ಬರಾವ್ ಎಂಬ ಕಾಲೇಜು ವಿದ್ಯಾರ್ಥಿ ಭಾಷಣ ಮಾಡಿ ಬಂಧಿತರಾದರು. ಆರ್.ಎಸ್.ಆರಾಧ್ಯರು ಬೆಂಗಳೂರಿನ ಕೇಂದ್ರ ಸಮಿತಿಯ ಜೊತೆ ಸಂಪರ್ಕವಿರಿಸಿಕೊಂಡು ಜಿಲ್ಲೆಯಾದ್ಯಂತ ಚಳುವಳಿಯನ್ನು ಸಂಘಟಿಸಿದರು. ಈ ಚಳುವಳಿಯು ಮೈಸೂರು ಸಂಸ್ಥಾನದಲ್ಲಿಯೂ ಸಹ ಬಹಳ ಬಿರುಸಿನಿಂದ ನಡೆಯಿತು.[೯] ಜನತೆಯ ವಿಧ್ವಂಸಕ ಕೃತ್ಯಗಳು ಹೆಚ್ಚಿದಷ್ಟು, ಸರ್ಕಾರದ ಅಧಿಕಾರಿಗಳು ಲಾಠಿ ಚಾರ್ಜ್, ಗುಂಡು ಹಾರಿಸುವಿಕೆ ಮತ್ತು ದಸ್ತಗಿರಿ ಕಾರ್ಯಗಳು ಹೆಚ್ಚಾಗ ತೊಡಗಿದವು. ತುಮಕೂರಿನಲ್ಲಿ ಮುನಿಸಿಪಲ್ ಗಾರ್ಡನ್‌ನಲ್ಲಿ ತುಮಕೂರಿನ ಕಾರ್ಮಿಕರು ಈ ಸಭೆಯಲ್ಲಿ ಮಿಲಿಟರಿಗೆ ಸರಬರಾಜು ಆಗುವ ಸರಕುಗಳನ್ನು ನಿಲ್ಲಿಸುವಂತಹ ಚಟುವಟಿಕೆಗಳನ್ನು ಮಾಡಿ ಸರಕು ಸೇವೆಗಳ ಸರಬರಾಜನ್ನು ಸ್ಥಗಿತಗೊಳಿಸಬೇಕೆಂದು ನಿರ್ಣಯಿಸಲಾಯಿತು. ಮರುದಿನವೇ ಗೊಲ್ಲಹಳ್ಳಿಯಲ್ಲಿ ಮದ್ಯದ ಅಂಗಡಿ ನಾಶ ಮಾಡಿದರು ಮತ್ತು

ಸೈನ್ಯಕ್ಕೆ ಸರಬರಾಜು ಮಾಡುವ ಹಾಲಿನ ಡಬ್ಬಗಳಲ್ಲಿನ ಹಾಲನ್ನು ಹೊರಚೆಲ್ಲಿದ ಘಟನೆ ನಿಡುಗುಂದದಲ್ಲಿ ನಡೆಯಿತು.[೧೦] ನಾಯಕರು ಸತ್ಯಾಗ್ರಹದಲ್ಲಿ ಜನರು ಹೆಚ್ಚು ಹೆಚ್ಚು ಭಾಗವಹಿಸಲು ಕರೆ ನೀಡಿದರು.

ಈಚಲು ಮರ ಕಡಿಯುವುದು, ಸರ್ಕಾರಿ ಕಛೇರಿಗಳ ಮೇಲೆ ಧ್ವಜಾರೋಹಣ, ಅಂಚೆ ತಂತಿಗಳನ್ನು ಕೀಳುವುದು ಮತ್ತು ರೈಲುಗಾಡಿಗಳನ್ನು ಸುಟ್ಟು ಭಸ್ಮ ಮಾಡುವಂತಹ ಚಟುವಟಿಕೆಗಳು ತಿಪಟೂರಿನಲ್ಲಿ ಹೆಚ್ಚಾಗಿ ನಡೆದು ತುಮಕೂರು ಜಿಲ್ಲೆಯು ಹೆಚ್ಚಿನ ಹೋರಾಟಕ್ಕೆ ಸ್ಫೂರ್ತಿ ನೀಡಿತು. ಈ ಚಳುವಳಿಯು ತಿಪಟೂರಿನಲ್ಲಿ ಆಗಸ್ಟ್ ೧೩ರಂದು ಪ್ರಾರಂಭವಾಗಿ ಸೆಪ್ಟಂಬರ್ ೧೦ರವರೆವಿಗೂ ಅವ್ಯಾಹತವಾಗಿ ನಡೆಯಿತು. ೧೯೪೨ರ ಅವಧಿಯಲ್ಲಿ ಸರ್ಕಾರ ಧ್ವಜಾರೋಹಣ, ಸಭೆ ಮೆರವಣಿಗೆಗಳು ನಡೆಯದಂತೆ ನಿಷೇಧಾಜ್ಞೆಗಳನ್ನು ಜಾರಿಗೊಳಿಸಿತ್ತು. ಜೊತೆಗೆ ಪತ್ರಿಕೆಗಳನ್ನು ಮುದ್ರಿಸದಂತೆಯೂ ನಿಷೇಧಾಜ್ಞೆ ಇತ್ತು. ತಿಪಟೂರಿನ ವಿಶ್ವನಾಥ ಶೆಟ್ಟರು ಆಂಧ್ರದಲ್ಲಿ ಪ್ರಕಟಿಸಲ್ಪಡುತ್ತಿದ್ದ ಕ್ರಾಂತಿ ಮತ್ತಿತರ ಪತ್ರಿಕೆಗಳನ್ನು ಗೌಪ್ಯವಾಗಿ ತರಿಸಿ ರಾಮಾನುಜ ಜೋಯಿಸರ ಮುಖಾಂತರ ತಿಪಟೂರಿನ ಜನತೆಗೆ ಸ್ವಾತಂತ್ರ್ಯ ಹೋರಾಟದ ಸುದ್ದಿ ತಿಳಿಯುವಂತೆ ಮಾಡುತ್ತಿದ್ದರು. ಚಳುವಳಿಯಲ್ಲಿ ವಿದ್ಯಾರ್ಥಿಗಳ ಪಾತ್ರವಂತೂ ಶ್ಲಾಘನೀಯವಾದದ್ದು. ವಿದ್ಯಾರ್ಥಿಗಳು ಕಾಲೇಜುಗಳನ್ನು ತ್ಯಜಿಸಿದರು. ಕಾರ್ಮಿಕರು ಕಾರ್ಖಾನೆ ಮತ್ತು ಗಿರಣಿಗಳಿಗೆ ವಿದಾಯ ಹೇಳಿ ಬಂದು ಚಳುವಳಿಯಲ್ಲಿ ಪಾಲ್ಗೊಂಡರು. ಇವರು ಚಳುವಳಿಯಲ್ಲಿ ಧೀಮಂತವಾಗಿ ಹೋರಾಡಿ ಬ್ರಿಟಿಷರನ್ನು ಓಡಿಸಬೇಕೆಂಬ ಮಹೋನ್ನತ ಧ್ಯೇಯವನ್ನು ಹೊಂದಿದ್ದರು. ಮೈಸೂರು ಸಂಸ್ಥಾನದಾದ್ಯಂತ ವಿದ್ಯಾರ್ಥಿಗಳು ಟಿಕೆಟ್‌ರಹಿತ ರೈಲು ಪ್ರಯಾಣ ಮಾಡಿದರು. ಜೊತೆಗೆ ಕೋರ್ಟ್ ಪಿಕೆಟಿಂಗ್ ಮಾಡಿ ಶಾಲಾ ಕಾಲೇಜುಗಳನ್ನು ಮುಚ್ಚಿಸಿದರು. ಸುಮಾರು ೧೫೦ ಮಂದಿ ತುಮಕೂರಿನಿಂದ ಗೊಲ್ಲಹಳ್ಳಿಯವರೆಗೆ ಟಿಕೆಟ್ ರಹಿತ ರೈಲು ಪ್ರಯಾಣ ಮಾಡಿದರು. ಕ್ಯಾತ್ಸಂದ್ರದಲ್ಲಿ ಅಂಚೆ ಡಬ್ಬಿಗಳನ್ನು ಹೊಡೆದು ಹಾಕಿ ಮದ್ಯದ ಅಂಗಡಿಗೆ ಬೆಂಕಿ ಹಚ್ಚಿದರು. ಅದೇ ದಿನ ತುಮಕೂರಿನಲ್ಲಿ ಇದ್ದ ಕೆಲವು ಮದ್ಯದ ಅಂಗಡಿಗಳನ್ನು ನಾಶ ಮಾಡಿದರು. ತುಮಕೂರಿನಲ್ಲಿ ಆಗಸ್ಟ್ ೧೫ರಂದು ಒಂದು ಸಾರ್ವಜನಿಕ ಮೆರವಣಿಗೆ ನಡೆಯಿತು. ಈ ಮೆರವಣಿಗೆಯಲ್ಲಿ ವಿದ್ಯಾರ್ಥಿಗಳು ಸರ್ಕಾರಿ ನೌಕರರು, ಕಾರ್ಮಿಕರು, ಮಹಿಳೆಯರು ಸಹ ಭಾಗವಹಿಸಿದರು. ಇವರು ಪಟ್ಟಣದ ಬೀದಿ ಬೀದಿಗಳಲ್ಲಿ 'ಬ್ರಿಟಿಷರೇ ಭಾರತ ಬಿಟ್ಟು ತೊಲಗಿ,' 'ಗಂಟು ಮೂಟೆ ಕಟ್ಟಿ' ಮುಂತಾದ ಘೋಷಣೆಗಳೊಂದಿಗೆ ಮೆರವಣಿಗೆ ಹೊರಟರು. ಈ ಮೆರವಣಿಗೆಯಲ್ಲಿ ಜಿಲ್ಲೆಯ ಕಾಂಗ್ರೆಸ್ ಬೆಂಬಲಿಗರು, ಸ್ವಾತಂತ್ರ್ಯ ಹೋರಾಟಗಾರರು ಆದ ಎಂ.ವಿ.ರಾಮರಾವ್, ಆರ್.ಎಸ್.ಆರಾಧ್ಯ, ಕೆ.ಭೀಮಯ್ಯ, ಆರ್.ಚನ್ನಿಗರಾಮಯ್ಯನವರು ಭಾಗವಹಿಸಿದ್ದರು. ಅದೇ ದಿನ ಎಂ.ವಿ.ರಾಮರಾವ್ ಅವರನ್ನು ಬಂಧಿಸಲಾಯಿತು. ಕೊರಟಗೆರೆಯಲ್ಲಿ ಚಳುವಳಿಗಾರರು ತಾಲ್ಲೂಕು ಕಛೇರಿಯ ಮೇಲೆ ಧ್ವಜಾರೋಹಣ ಮಾಡಿದರು. ಕೆಸ್ತೂರು, ದೇವಲಾಪುರ, ಆಗಲಕೋಟೆ, ಮುಂತಾದ ಕಡೆಗಳಲ್ಲಿ ಮದ್ಯದ ಅಂಗಡಿಗಳ ಪಿಕೆಟಿಂಗ್ ಮಾಡಿದರು. ಬ್ರಿಟ್ರಗೊರಕೆಯಲ್ಲಿ ಈಚಲು ಮರಗಳಿಗೆ ಕಟ್ಟಿದ ಗಡಿಗೆಗಳನ್ನು ಒಡೆದು ಹಾಕಿ ಈ ಮರಗಳಿಗೆ ಬೆಂಕಿಯನ್ನು ಹಚ್ಚಿದರು. ತುಮಕೂರಿನಲ್ಲಿ ಆಗಸ್ಟ್ ೧೬ರಂದು ಮಧ್ಯಾಹ್ನ ೧೦೦೦ ಜನರನ್ನೊಳಗೊಂಡ ಒಂದು

ಮೆರವಣಿಗೆಯಾಯಿತು. ಅದೇ ದಿನ ಶೇಷಮ್ಮ ಸುಬ್ರಮಣ್ಯ ಎಂಬ ಮಹಿಳೆಯ ನಾಯಕತ್ವದಲ್ಲಿ ಮಹಿಳೆಯರದೇ ಆದ ಒಂದು ಪ್ರತ್ಯೇಕ ಮೆರವಣಿಗೆ ನಡೆಯಿತು. ಸಾಯಂಕಾಲ ಸುಮಾರು ೬೦೦ ಮಂದಿಯನ್ನೊಳಗೊಂಡ ಮತ್ತೊಂದು ಮೆರವಣಿಗೆ ನಡೆಯಿತು. ಹೀಗೆ ದಿನಕ್ಕೆ ಒಂದು ಅಥವಾ ಎರಡು ಸಭೆ, ಮೆರವಣಿಗೆಗಳು ನಡೆಯುತ್ತಲೇ ಮುಂದುವರೆದವು. ಸಂಜೆ ಸಾರ್ವಜನಿಕ ಸಭೆ ನಡೆಯಿತು. ಅದರಲ್ಲಿ ೨೫೦ ಮಂದಿ ಮಹಿಳೆಯರೇ ಪಾಲ್ಗೊಂಡಿದ್ದರು. ಮಂಡಿ ಶ್ರೀ ಕಂಠಪ್ಪ ಮತ್ತು ನೀಲಕಂಠ ರಾವ್ ಸಭೆಯನ್ನುದ್ದೇಶಿಸಿ ಮಾತನಾಡಿದರು. ಕ್ರಮೇಣ ಸಂಸ್ಥಾನದಲ್ಲೆಲ್ಲಾ ನಾಯಕರ ಬಂಧನದಿಂದಾಗಿ ಕೆಲವರು ಭೂಗತರಾಗಿ ಕಾರ್ಯ ನಿರ್ವಹಿಸತೊಡಗಿದರು. ತುಮಕೂರು ಸಾರ್ವಜನಿಕ ಸಭೆ ಸಮಾರಂಭಗಳು, ಪೋಲಿಸರೊಂದಿಗೆ ಘರ್ಷಣೆಗಳು ದಿನ ನಿತ್ಯದ ಕಾರ್ಯಕ್ರಮಗಳಾದವು. ಆಗಸ್ಟ್ ೧೯ರಂದು ತುಮಕೂರಿನಲ್ಲಿ ಸಾರ್ವಜನಿಕ ಸಭೆಯಾಗಿ ೫೦೦೦ ಜನ ಪಾಲ್ಗೊಂಡು ಗೋಲಿಬಾರ್‌ನಲ್ಲಿ ಸಾವಿಗೀಡದ ಹುತಾತ್ಮರಿಗೆ ಸಂತಾಪ ಸೂಚಿಸಲಾಯಿತು. ಸಭೆಯಲ್ಲಿ ಬೀಜವಾಡ ಬಾನುಮೂರ್ತಿ, ಟಿ.ಪಿ.ಬ್ರಹ್ಮಯ್ಯ, ಬಿ.ಸಿ.ನಂಜುಡಯ್ಯನವರು ಭಾಷಣ ಮಾಡಿದರು. ಆಗಸ್ಟ್ ೨೦ರಂದು ವಿದ್ಯಾರ್ಥಿಗಳು ಸಭೆಯನ್ನು ಸಂಘಟಿಸಿದರು. ಬಿ.ಸಿ.ನಂಜುಂಡಯ್ಯನವರು ಚಳುವಳಿಯ ಉದ್ದೇಶವನ್ನು ಕುರಿತು ಮೊದಲು ಮಾತನಾಡಿ ಅನಂತರ ಅಖಿಲ ಭಾರತ ರಾಷ್ಟ್ರೀಯ ಕಾಂಗ್ರೆಸ್ ಕಳುಹಿಸಿದ ಸಂದೇಶವನ್ನು ಓದಿ ಗಾಂಧೀಜಿಯವರು 'ಮಾಡು ಇಲ್ಲವೇ ಮಡಿ' ಎಂಬುದು ಪ್ರತಿಯೊಬ್ಬರ ಗುರಿಯಾಗಬೇಕೆಂದು ಹೇಳಿದರು. ಜಿಲ್ಲಾಧಿಕಾರಿಗಳ ವರದಿಯ ಪ್ರಕಾರ ಕಳ್ಳಂಬೆಳ್ಳ ಮತ್ತು ಬೀದರಗುಂಡಿಗಳಲ್ಲಿ ಹೆಂಡದ ಅಂಗಡಿಗಳನ್ನು ಸುಡಲಾಯಿತು. ೧೯೪೨ರ ಚಳುವಳಿಯಲ್ಲಿ ಕೊರಟಗೆರೆ ತಾಲ್ಲೂಕಿನ ಹಳ್ಳಿ ಹಳ್ಳಿಗಳಲ್ಲಿ ಎಸ್.ಆರ್.ವೀರಶೆಟ್ಟರು, ಆರ್.ಚನ್ನಿಗರಾಮಯ್ಯ ಇನ್ನು ಮುಂತಾದವರು ಸೇರಿ ಪ್ರಚಾರ ಸಭೆ ಮೆರವಣಿಗೆ ಮಾಡಿ ಸೈಕ್ಲೋ ಸ್ಟೈಲ್ಡ್ ಬುಲೆಟಿನ್‌ಗಳನ್ನು ಹಂಚಿದರು. ಆಗಸ್ಟ್ ೧೮ರಂದು ತಾಲ್ಲೂಕು ಕಛೇರಿಯ ಮೇಲೆ ತ್ರಿವರ್ಣ ಧ್ವಜವನ್ನು ಹಾರಿಸಿ ಯಶಸ್ವಿಯಾದರು. ಚಳುವಳಿಗಾರರು ಕೆಸ್ತೂರು, ದೇವಲಾಪುರ ಮತ್ತು ಆಗಳಕೋಟೆಗಳಲ್ಲಿ ಸೇಂದಿ ಅಂಗಡಿಗಳನ್ನು ಧ್ವಂಸ ಮಾಡಿದರು. ಬಿಟ್ರಗೊರಕೆಯಲ್ಲಿ ಸೇಂದಿ ಮರಗಳನ್ನು ಕಡಿದು, ಸೇಂದಿ ಮರಗಳಿಗೆ ಕಟ್ಟಿದ ಗಡಿಗೆಗಳನ್ನು ಹೊಡೆದು ಹಾಕಿದರು. ಕೊರಟಗೆರೆ ಮತ್ತು ಹೊಳವನಹಳ್ಳಿ ಶಾಲೆಯ ಮುಂದೆ ಪಿಕೆಟೆಂಗ್ ನಡೆಸಿದರು. ಚಿಕ್ಕನಾಯಕನಹಳ್ಳಿ ಮತ್ತು ಕೂಡಿಗೇನಹಳ್ಳಿಯಲ್ಲಿಯೂ ಸರ್ಕಾರಿ ಕಟ್ಟಡಗಳ ಮೇಲೆ ಧ್ವಜಾ ರೋಹಣ ಮಾಡುವ ಮುಂತಾದ ಕಾರ್ಯಗಳು ಭರದಿಂದ ಸಾಗಿದವು. ಗುಬ್ಬಿಯಲ್ಲಿ ತಾಲ್ಲೂಕು ಕಛೇರಿ ಮುಂದೆ ಪಿಕೆಟಿಂಗ್ ನಡೆಯಿತು.[೧೧]

ಕ್ವಿಟ್ ಇಂಡಿಯಾ ಚಳುವಳಿಯ ಸಂದರ್ಭದಲ್ಲಿ ಬೇರೆ ಬೇರೆ ಕಡೆ ವ್ಯಾಸಂಗ ಮಾಡುತ್ತಿದ್ದ ವಿದ್ಯಾರ್ಥಿಗಳು ತಮ್ಮ ವಾಸಸ್ಥಳಗಳಿಗೆ ಹಿಂದಿರುಗಿ ಚಳುವಳಿಯಲ್ಲಿ ಭಾಗವಹಿಸಿದ್ದರು. ಅವರಲ್ಲಿ ಕಲ್ಕತ್ತದಲ್ಲಿ ವಿದ್ಯಾಭ್ಯಾಸವನ್ನು ಮಾಡುತ್ತಿದ್ದ ಚಂದ್ರಶೇಖರ್ ಎಂಬುವವರು ವಿದ್ಯಾಭ್ಯಾಸವನ್ನು ತ್ಯಜಿಸಿ ತಿಪಟೂರಿಗೆ ಬಂದು ಸ್ವಾತಂತ್ರ್ಯ ಸಂಗ್ರಾಮದಲ್ಲಿ ಧುಮುಕಿದರು. ಇವರು ಜನತೆಯನ್ನು ಸಂಘಟಿಸಿ ಹಲವಾರು

ಕಡೆ ಸೇಂದಿ ಅಂಗಡಿಗಳನ್ನು ಸುಟ್ಟು ಹಾಕಿದ್ದಲ್ಲದೆ, ಟೆಲಿಗ್ರಾಫ್ ತಂತಿಗಳನ್ನು ಕತ್ತರಿಸಿದರು ಹೀಗೆಯೇ ತುಮಕೂರು ಸಭೆ ಸಮಾರಂಭಗಳು, ದಸ್ತಗಿರಿಗಳು ದಿನನಿತ್ಯದ ಚಟುವಟಿಕೆಗಳಾಗಿ, ದಿನೇ ದಿನೇ ಕ್ವಿಟ್ ಇಂಡಿಯಾ ಚಳುವಳಿ ಬಹಳ ಬಿರುಸಿನಿಂದ ಸಾಗಿತ್ತು. ಈ ಚಳುವಳಿಯಲ್ಲಿ ವಿದ್ಯಾರ್ಥಿಗಳು ಬಹಳ ಪ್ರಮುಖ ಪಾತ್ರ ವಹಿಸಿದರು. ಈಸೂರು ದುರಂತ ಕ್ವಿಟ್ ಇಂಡಿಯಾ ಚಳುವಳಿಗೆ ಒಂದು ಹೊಸ ತಿರುವನ್ನು ನೀಡಿತು. ಈ ದುರಂತದಿಂದ ರೊಚ್ಚಿಗೆದ್ದ ವಿದ್ಯಾರ್ಥಿಗಳು ವಿಧ್ವಂಸಕ ಕೃತ್ಯಗಳಲ್ಲಿ ತೊಡಗಿದರು.[೧೨] ಸರೋಜಮ್ಮ ಮತ್ತು ಅಮೃತಬಾಯಿ ಎಂಬ ವಿದ್ಯಾರ್ಥಿನಿಯರು ಮಹಿಳೆಯರನ್ನು ಸಂಘಟಿಸಿ ಆಗಸ್ಟ್ ೩೦ರಂದು ಸಭೆಯನ್ನು ಏರ್ಪಡಿಸಿ, ಚಳುವಳಿಯಲ್ಲಿ ಪ್ರತಿಯೊಬ್ಬರೂ ಸ್ಫೂರ್ತಿಯಿಂದ ಭಾಗವಹಿಸಬೇಕೆಂದು ಕರೆ ನೀಡಿದರು. ಸರ್ಕಾರ ಎಷ್ಟೇ ನಿಷೇಧಾಜ್ಞೆಗಳನ್ನು ಜಾರಿಯಲ್ಲಿ ತಂದರೂ ಸಹ ಪ್ರಯೋಜನವಾಗಲಿಲ್ಲ. ಜಿಲ್ಲೆಯಾದ್ಯಂತ ಸಭೆ, ಮೆರವಣಿಗೆಗಳು ಮತ್ತು ಮದ್ಯದ ಅಂಗಡಿಗಳ ಪಿಕೆಟಿಂಗ್‌ಗಳು ಅವ್ಯಾಹತವಾಗಿ ಜರುಗಿದವು. ವಿದ್ಯಾರ್ಥಿ ಮುಷ್ಕರ ಹಿಂದೆಗೆತದಿಂದ ವಿದ್ಯಾರ್ಥಿಗಳ ಮನಸ್ಸಿನಲ್ಲಿ ವೈಫಲ್ಯ ಭಾವನೆ ಹಲವು ವಿಧ್ವಂಸಕ ಕೃತ್ಯಗಳಲ್ಲಿ ಹೊರಹೊಮ್ಮಿತು. ಚಳುವಳಿಯನ್ನು ಹತ್ತಿಕ್ಕಲು ಕಾರಣವಾದ ಅಧಿಕಾರಿಗಳ ಮನೆಗಳ ಮೇಲೆ ಕಲ್ಲುತೂರಾಟ ಮುಂತಾದ ಕೃತ್ಯಗಳು ನಡೆದುಹೋದವು. ಅನೇಕ ವ್ಯವಸ್ಥಿತವಾದ ವಿಧ್ವಂಸಕ ಗುಂಪುಗಳು ಗುಪ್ತವಾಗಿ ರಚನೆಯಾಗಿ, ಸ್ವಯಂಸೇವಕರಾಗಿ ನಾಡಬಾಂಬುಗಳ ಪೂರೈಕೆಯಾದವು. ಅವುಗಳ ಪ್ರಯೋಗ ಶಾಲಾ ಕಾಲೇಜುಗಳಲ್ಲಿ, ರೈಲ್ವೆ ನಿಲ್ದಾಣಗಳಲ್ಲಿ ನಡೆದವು. ಇದರಿಂದ ವಿದ್ಯಾರ್ಥಿಗಳು ಶಾಲಾ ಕಾಲೇಜುಗಳಿಗೆ ಹೋಗುವುದನ್ನು ತಡೆದಂತಾಯಿತು. ಕೋಟೆ ಬಾಲಕರ ಶಾಲೆಯ ಪೀಠೋಪಕರಣಗಳ ಕೊಠಡಿಗೆ ನುಗ್ಗಿ ಪೀಠೋಪಕರಣಗಳಿಗೆ ಬೆಂಕಿ ಇಟ್ಟರು. ಚಳುವಳಿಕಾರರು ಇಂಟರ್ ಮೀಡಿಯೆಟ್ ಕಾಲೇಜಿನ ತರಗತಿಯೊಂದರಲ್ಲಿ ಬಾಂಬ್ ಸ್ಫೋಟ ಮಾಡಿದರು. ಶಾಲೆಯ ಕಟ್ಟಡದ ಹಿಂಭಾಗದಲ್ಲಿ ಒಂದು ಹುಲ್ಲಿನ ಬಣವೆಗೆ ಬೆಂಕಿ ಇಟ್ಟರು. ಹೀಗೆ ವಿದ್ಯಾರ್ಥಿಗಳ ವಿಧ್ವಸಂಕ ಕೃತ್ಯಗಳು ಮುಂದುವರೆಯುತ್ತಲೇ ಸಾಗಿದವು. ಕ್ವಿಟ್ ಇಂಡಿಯಾ ಚಳುವಳಿಯಲ್ಲಿ ಸಕ್ರಿಯವಾಗಿ ಭಾಗವಹಿಸಿ ಆರ್‌ಯ ಚನ್ನಿಗರಾಮಯ್ಯವರನ್ನು ಕೊರಟಗೆರೆಯಲ್ಲಿ ಬಂಧಿಸಿ ಬೆಂಗಳೂರು ಸೆಂಟ್ರಲ್ ಜೈಲಿಗೆ ತಂದರುಯ ಇವರ ಆರೋಗ್ಯ ಕೆಟ್ಟಿದ್ದರಿಂದ, ಕ್ಷಮಾಪಣೆ ಬರೆದು ಕೊಟ್ಟು ಮನೆಗೆ ತೆರಳುವಂತೆ ಅನೇಕ ಮಿತ್ರರು ಒತ್ತಾಯಿಸಿದರೂ. ಇವರು ಹಾಗೆ ಮಾಡದೆ 'ನಾನು ಸ್ವಾತಂತ್ರ್ಯ ಹೋರಾಟಕ್ಕಾಗಿ ಬಂದಿರುವೆ, ಸ್ವಾತಂತ್ರ್ಯ ಸಿಗುವ ತನಕ ಬರುವುದಿಲ್ಲ. ಜೈಲಿನಲ್ಲೇ ದೇಶಕ್ಕೋಸ್ಕರ ಪ್ರಾಣ ಬಿಡಲು ಸಿದ್ಧವಾಗಿ ಇದ್ದೇನೆ' ಎಂದು ಹೇಳಿದರು. ಜೈಲಿನಿಂದ ಸರಕಾರ ತಾನಾಗಿ ಬಿಡುಗಡೆ ಮಾಡುವ ತನಕ ಅನಾರೋಗ್ಯ ಸಹಿಸಿ ಜೈಲಿನಲ್ಲಿ ಉಳಿದರು.

ಬೆಂಗಳೂರು, ತುಮಕೂರು ಮತ್ತು ಮೈಸೂರು ವಲಯಗಳಲ್ಲಿ ಡಿಸೆಂಬರ್ ವೇಳೆಗಾಗಲೇ ಚಳುವಳಿ ಬಹುಮಟ್ಟಿಗೆ ತಣ್ಣಗಾಯಿತು. ಇದೇ ಸಂದರ್ಭದಲ್ಲಿ ವಿದ್ಯಾರ್ಥಿಗಳು, ಕಾರ್ಮಿಕರು ಮುಷ್ಕರವನ್ನು ನಿಲ್ಲಿಸುತ್ತಾ ಬಂದದ್ದರಿಂದ ಚಳುವಳಿಯು ಸಾಮೂಹಿಕ ಸ್ವರೂಪವನ್ನು ಹಿಂತೆಗೆದುಕೊಂಡಿತು. ನಂತರ ಅಲ್ಲಲ್ಲಿ ಮಾತ್ರ ಸರ್ಕಾರ ವಿರೋಧಿ ಕೃತ್ಯಗಳು ನಡೆದವು. ಅದೂ ಅಲ್ಲದೆ ವಿದ್ಯಾರ್ಥಿಗಳು ಮುಷ್ಕರವನ್ನು

ಹಿಂತೆಗೆದುಕೊಂಡ ನಂತರ, ಶಿಕ್ಷಣ ಸಂಸ್ಥೆಗಳಲ್ಲಿ ನಡೆದ ವಿಧ್ವಸಂಕ ಕೃತ್ಯಗಳು ಡಿಸೆಂಬರ್ ೧೫ರ ನಂತರ, ತುಮಕೂರು ಜಿಲ್ಲೆಯಲ್ಲಿ ಚಳುವಳಿ ಸ್ಥಗಿತಗೊಂಡಿತು. ಹೀಗೆ ಆಗಸ್ಟ್ ತಿಂಗಳಲ್ಲಿ ಪ್ರಾರಂಭವಾದ ಈ ಚಳುವಳಿಯು ಡಿಸೆಂಬರ್ ೧೫ರ ತನಕ ಅವ್ಯಾಹತವಾಗಿ ನಡೆಯಿತು.

ಮೈಸೂರು ಸಂಸ್ಥಾನದ ಜನತೆ ಹಿಂದಿನ ಎಲ್ಲಾ ಹೋರಾಟಗಳಿಗಿಂತ ನೂರುಪಟ್ಟು ಹೆಚ್ಚು ಉತ್ಸಾಹದಿಂದ ಸರ್ವ ಸಮರ್ಪಣಾ ಭಾವದಿಂದ ಈ ಚಳುವಳಿಗೆ ಬಂದು ಧುಮುಕಿತು. ಸ್ವಾತಂತ್ರ್ಯಕ್ಕಾಗಿ ನಡೆದ ಅಸಹಕಾರ ಚಳುವಳಿ, ನಾಗರಿಕ ಕಾನೂನುಭಂಗ ಚಳುವಳಿಗೆ ನಾಯಕರ ಮಾರ್ಗದರ್ಶನ ಅನ್ನುವುದೇ ಇರಲಿಲ್ಲ. ಈ ಚಳುವಳಿಯಲ್ಲಿ ಸಮಾಜದ ಪ್ರತಿಯೊಂದು ವರ್ಗದ ಜನತೆ ಅಂದರೆ ವಿದ್ಯಾವಂತರು, ಅವಿದ್ಯಾವಂತರು, ಮಹಿಳೆಯರು, ಕಾರ್ಮಿಕರು, ಗ್ರಾಮೀಣ ಪ್ರದೇಶದ ಜನತೆಯು ಸಹ ಭಾಗವಹಿಸಿ ತ್ಯಾಗ ಎನ್ನುವ ಕೊಡುಗೆಯನ್ನು ನೀಡುವುದರ ಮೂಲಕ ಸ್ವಾತಂತ್ರ್ಯಕ್ಕೆ ನಾಂದಿಯಾದರು.[೧೩]

### ೩.೩. ಮೈಸೂರು ಚಲೋ ಚಳುವಳಿ

ಮೈಸೂರು ಒಡೆಯರು ೧೩೯೯ರಲ್ಲಿ ರಾಜ್ಯಾಡಳಿತ ಪ್ರಾರಂಭಿಸಿದರುಯ ಒಡೆಯರ ರಾಜಮನೆತನದಲ್ಲಿ ಇಪ್ಪತ್ತೈದು ಮಹಾರಾಜರು ಆಳ್ವಿಕೆ ನಡೆಸಿದ ನಂತರ ಹೈದರಾಲಿಗೆ ಆಡಳಿತ ನಡೆಸಲು ಅವಕಾಶ ಒದಗಿಬಂದು ೧೭೯೯ವರೆಗೂ ಮೈಸೂರಿನ ಆಡಳಿತವನ್ನು ನಡೆಸಿ ಬ್ರಿಟಿಷರೊಡನೆ ಹೋರಾಡುತ್ತ ರಣರಂಗದಲ್ಲಿ ಹತನಾದನು. ಟಿಪ್ಪು ನಿಧನದ ನಂತರ ಮೈಸೂರು ಆಡಳಿತ ಭಾಗಗಳು ಬಾಂಬೆ ಪ್ರಾಂತ್ಯ ಮತ್ತು ಹೈದರಾಬಾದ್ ಪ್ರಾಂತ್ಯ ಹಾಗೂ ಮದ್ರಾಸ್ ಪ್ರಾಂತ್ಯಗಳಲ್ಲಿ ಹಂಚಿಹೋದವು. ಹೀಗೆ ಮೈಸೂರು ಸಂಸ್ಥಾನವು ಅಸ್ತಿತ್ವಕ್ಕೆ ಬಂದು ಎಂಟು ಜಿಲ್ಲೆಗಳನ್ನೊಳಗೊಂಡಿತ್ತು. ನಂತರ ೧೭೯೯ರಲ್ಲಿ ಬ್ರಿಟಿಷರ ಆಧಿಪತ್ಯದಡಿಯಲ್ಲಿ ಮೈಸೂರು ಒಡೆಯರು ಪುನಃ ಅಧಿಕಾರಕ್ಕೆ ಬಂದರು. ೧೮೩೦-೩೧ರಲ್ಲಿ ನಗರ ದಂಗೆಯ ನೆಪವೊಡ್ಡಿ ಬ್ರಿಟಿಷರು ಒಡೆಯರಿಂದ ಅಧಿಕಾರವನ್ನು ಹಿಂಪಡೆದು ಕಮೀಷನರ್‌ಗಳಿಗೆ ಅಧಿಕಾರ ವಹಿಸಿದರು. ೧೮೩೧ರಿಂದ ೧೮೮೧ರವರೆಗೂ ಕಮೀಷನರ್‌ಗಳು ಮೈಸೂರಿನ ಸಂಸ್ಥಾನದಲ್ಲಿ ಆಳ್ವಿಕೆ ನಡೆಸಿದರು. ೧೮೮೧ರ ಬೆಳವಣಿಗೆ ನಂತರ ಸಂಸ್ಥಾನದ ವಿರುದ್ಧ ಜನತೆಯಲ್ಲಿ ರಾಷ್ಟ್ರೀಯತೆಯ ಬೀಜಾಂಕುರವಾಗತೊಡಗಿತು. ಒಡೆಯರ ಪ್ರಭುತ್ವದಿಂದ ಮುಕ್ತರಾಗಿ ಪ್ರಜಾಸರ್ಕಾರವನ್ನು ಪಡೆಯಬೇಕೆಂಬ ಹಂಬಲವೂ ಪಿಸುಗುಟ್ಟತೊಡಗಿತು. ಈ ಸಂದರ್ಭದಲ್ಲಿ ಸಂಸ್ಥಾನದಲ್ಲಿ ಜನ್ಮ ತಾಳಿದ ಪ್ರಜಾಪ್ರತಿನಿಧಿ ಸಭೆ (೧೮೮೧) ನ್ಯಾಯ ವಿಧಾಯಕ ಸಭೆ (೧೯೦೭) ಪ್ರಜಾಮಿತ್ರಮಂಡಳಿ (೧೯೧೭) ಎಂಬ ಸಂಸ್ಥೆಗಳು, ಜೊತೆಗೆ ಅಂದಿನ ಪತ್ರಿಕೆಗಳು ರಾಷ್ಟ್ರೀಯ ಭಾವನೆ ಬೇರು ಬಿಡಲು ಕಾರಣವಾದವು. ಬಾಂಬೆ ಸಂಸ್ಥಾನದಲ್ಲಿ ರಾಷ್ಟ್ರೀಯ ನಾಯಕರ ಸ್ಫೂರ್ತಿದಾಯಕ ಭಾಷಣಗಳು ಮತ್ತು ವಿಚಾರಧಾರೆಗಳ ಪ್ರಭಾವದಿಂದಾಗಿ ಜನರಲ್ಲಿ ರಾಜಪ್ರಭುತ್ವ ವಿರೋಧಿ ಭಾವನೆ ಮೂಡತೊಡಗಿತು. ಈ ಸಂದರ್ಭದಲ್ಲಿ ಬಲವಾದ ರಾಷ್ಟ್ರೀಯ ಚಟುವಟಿಕೆಗಳನ್ನು ಹತ್ತಿಕ್ಕಲು ಮಹಾರಾಜರ ಮೇಲೆ ಬ್ರಿಟಿಷ್ ಆಡಳಿತ ಒತ್ತಾಯ ತಂದಿತು. ಸಂಸ್ಥಾನವು ಒತ್ತಾಯಗಳಿಗೆ ಮಣಿದು ಸಂಸ್ಥಾನದಲ್ಲಿ ನಿರ್ಬಂಧಗಳನ್ನೇರುತ್ತಿದ್ದರು.[೧೪] ಪರಿಣಾಮವಾಗಿ ಜನತೆ ಪ್ರಬಲವಾಗಿ ಸಂಸ್ಥಾನದ ಸರ್ಕಾರವನ್ನು ವಿರೋಧಿಸಿ

ಪ್ರಜಾಸರ್ಕಾರದ ಸ್ಥಾಪನೆಗೆ ತೀವ್ರ ಹೋರಾಟ ಆರಂಭಿಸಿತು. ಈ ಹೋರಾಟದಿಂದ ತುಮಕೂರು ಜಿಲ್ಲೆ ಹೊರತಾಗಿರಲಿಲ್ಲ. ಮೈಸೂರು ಚಲೋ ಚಳುವಳಿ ತನ್ನದೇ ಆದ ಬೆಳವಣಿಗೆಯನ್ನು ಪಡೆದುಕೊಂಡಿರುವುದು ಜಿಲ್ಲೆಯ ರಾಜಕೀಯ ಇತಿಹಾಸವನ್ನು ಗಮನಿಸಿದರೆ ಹೀಗೆ ಸ್ಪಷ್ಟವಾಗುತ್ತದೆ. ತುಮಕೂರು ಜಿಲ್ಲೆಯ ಹಿರಿಯ ಕಾಂಗ್ರೆಸ್ಸಿಗರಾದ ಡಿ.ಎಸ್.ಮಲ್ಲಪ್ಪನವರು ೧೯೧೭ರಲ್ಲಿ ಪ್ರಜಾಮಿತ್ರ ಮಂಡಳಿ ರೂಪುಗೊಂಡಾಗ ಸಕ್ರಿಯ ಸದಸ್ಯರಾಗಿ ಪಾಲ್ಗೊಂಡಿದ್ದರು. ಈ ಮೂಲಕ ಮೈಸೂರು ಚಳುವಳಿಯ ಮೂಲ ಪ್ರೇರಣೆಗಳು ಆರಂಭವಾಗಿದ್ದನ್ನು ಗುರುತಿಸುತ್ತೇವೆ. ಪ್ರಜಾಮಿತ್ರ ಮಂಡಳಿಯು ಕೆಲವೇ ಜನರನ್ನು ಪ್ರತಿನಿಧಿಸುತ್ತದೆ ಎಂಬ ಅಭಿಪ್ರಾಯದಿಂದ ಒಬ್ಬರು ಉದಾರವಾದಿಗಳು ಪ್ರಜಾಮಿತ್ರ ಮಂಡಳಿಯಿಂದ ಹೊರಬಂದು ಪ್ರಜಾಪಕ್ಷವನ್ನು ಸ್ಥಾಪಿಸಿದರು. ಈ ಸಂಸ್ಥೆಯ ಸ್ಥಾಪಕರಲ್ಲಿ ಡಿ.ಎಸ್.ಮಲ್ಲಪ್ಪನವರು ಒಬ್ಬರು. ಈ ಪಕ್ಷದ ಮೊದಲ ಅಧಿವೇಶನ ಚನ್ನಪಟ್ಟಣದಲ್ಲಿ ನಡೆದಾಗ ಸ್ವಾಗತ ಸಮಿತಿಯ ಅಧ್ಯಕ್ಷರಾಗಿ ಜವಾಬ್ದಾರಿಯನ್ನು ವಹಿಸಿದ್ದರು. ಆ ಅಧಿವೇಶನದಲ್ಲಿ ಸಂಸ್ಥಾನ ಸರ್ಕಾರದ ಆಡಳಿತ ವೈಖರಿಯನ್ನು ಖಂಡಿಸಿ ಜವಾಬ್ದಾರಿ ಸರ್ಕಾರದ ಸ್ಥಾಪನೆಗಾಗಿ ಒತ್ತಾಯಿಸಿದರು. ನಂತರ ಮೂರನೇ ಅಧಿವೇಶನವು ೧೯೩೧ರಲ್ಲಿ ತುಮಕೂರಿನಲ್ಲಿ ನಡೆಯಿತು. ಈ ಅಧಿವೇಶನವನ್ನು ತುಮಕೂರು ಜಿಲ್ಲೆಯ ಕಾಂಗ್ರೆಸ್ಸಿನ ಹೋರಾಟಗಾರರಾದ ರಂಗಯ್ಯಂಗಾರ್, ತಾಳೆಕೆರೆ ಸುಬ್ರಮಣ್ಯ, ಆರ್.ಎಸ್.ಆರಾಧ್ಯ, ಬಿ.ಸಿ.ನಂಜುಡಪ್ಪ, ಆರ್.ಚನ್ನಿಗರಾಮಯ್ಯ ಮುಂತಾದ ನಾಯಕರು ಒಗ್ಗಟ್ಟಿನಿಂದ ವ್ಯವಸ್ಥಿತವಾಗಿ ಸಂಘಟಿಸಿದರು.[೧೫]

೧೯೩೮ರಲ್ಲಿ 'ಮೈಸೂರು ಕಾಂಗ್ರೆಸ್' ಹುಟ್ಟಿಕೊಂಡು ಟಿ.ಸಿದ್ಧಲಿಂಗಯ್ಯನವರ ಅಧ್ಯಕ್ಷತೆಯಲ್ಲಿ ತೀವ್ರ ಹೋರಾಟವನ್ನು ನಡೆಸಿತು. ಮೈಸೂರು ಕಾಂಗ್ರೆಸ್ ಜನ್ಮ ತಾಳಿದ ಮೇಲೆ ಜವಾಬ್ದಾರಿ ಸರ್ಕಾರದ ಹಕ್ಕೊತ್ತಾಯದ ಹಿನ್ನೆಲೆಯಲ್ಲಿ ನಡೆದ ಶಿವಪುರ ಧ್ವಜ ಸತ್ಯಾಗ್ರಹ ಮತ್ತು ವಿದುರಾಶ್ವತ್ಥ ಘಟನೆಯನ್ನು ಗಮನಿಸಿದಾಗ, ತುಮಕೂರು ಜಿಲ್ಲೆಯ ಕೆ.ಹಂಜಾರಪ್ಪ, ಮಾಲಿಮರಿಯಪ್ಪ, ಆರ್.ಚನ್ನಿಗರಾಮಯ್ಯ ಇವರೆಲ್ಲಾ ಭಾಗವಹಿಸಿ ಜವಾಬ್ದಾರಿ ಸರ್ಕಾರಕ್ಕಾಗಿ ಬೆಂಬಲಿಸಿದರು. ೧೯೩೮ರ ಘಟನೆಯ ನಂತರ ಮಹಾತ್ಮಗಾಂಧೀಜಿಯವರು ಸಂಸ್ಥಾನದಲ್ಲಿ ಒಡೆಯರ ಆಡಳಿತದ ಬಗ್ಗೆ ಅತೃಪ್ತಿ, ಅಸಮಾಧಾನ ವ್ಯಕ್ತಪಡಿಸಿದರು. ಇದು ಸಂಸ್ಥಾನ ಜನತೆಯ ವಿರೋಧಿ ಚಳುವಳಿಯ ಉತ್ಸಾಹವನ್ನು ಹಿಮ್ಮಡಿಗೊಳಿಸಿತು. ಸಂಸ್ಥಾನದಾದ್ಯಂತ ಕಾಂಗ್ರೆಸ್ ಬೆಂಬಲಿಗರು ಸಭೆ, ಸಮಾರಂಭಗಳನ್ನು ಹಮ್ಮಿಕೊಂಡು ಜವಾಬ್ದಾರಿ ಸರ್ಕಾರ ಸ್ಥಾಪನೆಯ ಬಗ್ಗೆ ಸಾರ್ವಜನಿಕರಲ್ಲಿ ಜಾಗೃತಿ ಮೂಡಿಸುವಂತಹ ಚಟುವಟಿಕೆಗಳಲ್ಲಿ ತೊಡಗಿದರು. ತುಮಕೂರು ಜಿಲ್ಲಾ ಕಾಂಗ್ರೆಸ್, ವೀರಪುರದಲ್ಲಿ ೧೯೩೮ರಲ್ಲಿ ಜವಾಬ್ದಾರಿ ಸರ್ಕಾರದ ದಿನ ಮತ್ತು ತಿರುವಾಂಕೂರು ದಿನಾಚರಣೆಯನ್ನು ಹಮ್ಮಿಕೊಂಡಿತ್ತು. ಈ ಸಮಾರಂಭದಲ್ಲಿ ಟಿ.ತಾರೇಗೌಡ, ಎಚ್.ನಂಜಶೆಟ್ಟಿ ಮತ್ತು ಮಾಲಿಮರಿಯಪ್ಪ ಅವರು ಭಾಗವಹಿಸಿದ್ದರು. ಇವರು ಮೈಸೂರು ಕಾಂಗ್ರೆಸ್‌ನ ಧ್ಯೇಯೋದ್ದೇಶದ ಬಗ್ಗೆ ಮಾತನಾಡಿದರು. ಜೊತೆಗೆ ಇಂದು ಸಂಸ್ಥಾನದಲ್ಲಿ ಅನಕ್ಷರತೆ, ಬಡತನ ಮತ್ತು ರೈತರ ಬವಣೆಗಳು ಹೆಚ್ಚುತ್ತಿವೆ. ಈ ಎಲ್ಲಾ ಸಮಸ್ಯೆಗಳಿಗೂ ಪ್ರಜಾಸರ್ಕಾರದ ಸ್ಥಾಪನೆಯೊಂದೇ ಪರಿಹಾರ ಎಂದು ಮಾತನಾಡಿ ಜವಾಬ್ದಾರಿ ಸರ್ಕಾರದ ಮಹತ್ವವನ್ನು ತಿಳಿಸಿ, ಜವಾಬ್ದಾರಿ ಸರ್ಕಾರದ ಸ್ಥಾಪನೆಗೆ ಆಗ್ರಹಪಡಿಸಿದರು.[೧೬]

ಮೈಸೂರು ಕಾಂಗ್ರೆಸ್ ಅಧ್ಯಕ್ಷರಾದ ಕೆ.ಸಿ.ರೆಡ್ಡಿಯವರು ೧೯೪೬ರ ನವೆಂಬರ್ ೨ರಂದು ಬೆಂಗಳೂರಿನ ಸುಭಾಷ್ ನಗರದಲ್ಲಿ ಏರ್ಪಡಿಸಿದ ಕಾಂಗ್ರೆಸ್ ಸಭೆಯಲ್ಲಿ ಮೈಸೂರು ಸಂಸ್ಥಾನದಲ್ಲಿ ಜವಾಬ್ದಾರಿ ಸರ್ಕಾರದ ಸ್ಥಾಪನೆಗಾಗಿ ಪ್ರತಿಯೊಬ್ಬರೂ ತ್ಯಾಗ, ಬಲಿದಾನಗಳಿಗೆ ಸಿದ್ಧರಾಗಬೇಕೆಂದು ಕರೆ ನೀಡಿದರು. ನಂತರ ಚಳುವಳಿಗೆ ಬೆಂಬಲ ಗಳಿಸಲು ಸಂಸ್ಥಾನದಾದ್ಯಂತ ಪ್ರಚಾರ ಕಾರ್ಯವನ್ನು ಹಮ್ಮಿಕೊಳ್ಳಲು ತೀರ್ಮಾನಿಸಿದರು. ಅದರಂತೆ ಕೆ.ಸಿ.ರೆಡ್ಡಿ ಸೇರಿದಂತೆ ಮೂರು ತಂಡಗಳು ಸಿದ್ಧವಾದವು. ಒಂದು ತಂಡದಲ್ಲಿ ತುಮಕೂರು ಜಿಲ್ಲೆಯ ಹಿರಿಯ ಕಾಂಗ್ರೆಸ್ಸಿಗರಾದ ತಾಳಕೆರೆ ಸುಬ್ರಮಣ್ಯಂ ಸಹ ಜಿಲ್ಲೆಯ ಪ್ರತಿನಿಧಿಯಾಗಿ ತಮ್ಮ ಪಾಲಿನ ಕರ್ತವ್ಯವನ್ನು ನಿರ್ವಹಿಸಿದರು. ಕೆ.ಸಿ.ರೆಡ್ಡಿ, ತಾಳಕೆರೆ ಸುಬ್ರಹ್ಮಣ್ಯ ಮತ್ತು ರಾಜಶೇಖರ್ ಹಿರೇಮಠ ಅವರು ಕೋಲಾರ, ತುಮಕೂರು, ಚಿತ್ರದುರ್ಗ ಜಿಲ್ಲೆಗಳಲ್ಲಿ ಪ್ರವಾಸ ಕೈಗೊಂಡು ಚಳವಳಿಗೆ ಬೆಂಬಲವನ್ನು ಗಳಿಸಿದರು. ಭಾರತದ ಇತಿಹಾಸದಲ್ಲಿ ೧೯೪೭ರ ಆಗಸ್ಟ್ ೧೫ ಸುದಿನ. ಅಹಿಂಸೆ ಮತ್ತು ಶಾಂತಿ ತತ್ವಗಳಿಂದ ಬ್ರಿಟಿಷರ ದಬ್ಬಾಳಿಕೆಯನ್ನು ಎದುರಿಸಿದ್ದರಿಂದ ದೊರೆತ ಪ್ರತಿಫಲ ಮೈಸೂರು ಸಂಸ್ಥಾನದ ಮಹಾರಾಜರು ಶ್ರೀ ಜಯಚಾಮರಾಜೇಂದ್ರ ಒಡೆಯರು ಸಂಸ್ಥಾನವನ್ನು ಭಾರತದ ಒಕ್ಕೂಟಕ್ಕೆ ಸೇರಿಸುವುದಾಗಿ ಘೋಷಿಸಿದರು. ಆದರೆ ಜವಾಬ್ದಾರಿ ಸರ್ಕಾರವನ್ನು ನೀಡಲು ಮನಸ್ಸು ಮಾಡಲಿಲ್ಲ. ಪರಿಣಾಮವಾಗಿ ಅಸಹನೆಗೊಂಡ ಸಂಸ್ಥಾನದ ಕಾಂಗ್ರೆಸ್ಸಿಗರು ಜವಾಬ್ದಾರಿ ಸರ್ಕಾರ ಸ್ಥಾಪಿಸದಿದ್ದರೆ ಮೈಸೂರು ಚಲೋ ಅಥವಾ ಅರಮನೆ ಸತ್ಯಾಗ್ರಹ ಹೂಡುವುದಾಗಿ ಎಚ್ಚರಿಕೆ ನೀಡಿದರು. ಕಾಂಗ್ರೆಸ್ಸಿಗರ ನಿರ್ಣಯದಂತೆ ಸೆಪ್ಟೆಂಬರ್ ೧ ರಂದು ಮೈಸೂರು ಚಲೋ ಚಳುವಳಿಗೆ ಕರೆ ನೀಡಲಾಯಿತು.[೧೭] ಮೈಸೂರು ಚಲೋ ಚಳುವಳಿಯ ಸಂದರ್ಭದಲ್ಲಿ ಸಂಸ್ಥಾನದಾದ್ಯಂತ ಕಾಂಗ್ರೆಸ್ ಕಾರ್ಯಕರ್ತರು ಸಭೆಗಳನ್ನು ಏರ್ಪಡಿಸಿ, ಮೈಸೂರು ಚಲೋ ಚಳುವಳಿಗೆ ಕೋರ್ಟ್ ಕಛೇರಿಗಳ ಪಿಕೆಟಿಂಗ್, ಮದ್ಯದಂಗಡಿಗಳ ಪಿಕೆಟಿಂಗ್, ಸಭೆ ಮೆರವಣಿಗೆಗಳು ಸರ್ಕಾರಿ ಕಟ್ಟಗಳ ಮೇಲೆ ಧ್ವಜಾರೋಹಣ, ಮುಂತಾದ ಚಟುವಟಿಕೆಗಳು ತೀವ್ರತರವಾಗಿ ಸಾಗಿದವು. ಸೆಪ್ಟೆಂಬರ್ ೧ರಂದು ತುಮಕೂರು ಜಿಲ್ಲೆಯ ಮಧುಗಿರಿಯಲ್ಲಿ ಶ್ರೀಯುತ ಮಾಲಿಮರಿಯಪ್ಪ ಮತ್ತು ಕೆ.ಹೆಂಜೇರಪ್ಪರವರು ಸಭೆಯನ್ನುಏರ್ಪಡಿಸಿದರು. ಈ ಸಭೆಯಲ್ಲಿ ಮಾಲಿಮರಿಯಪ್ಪನವರು 'ಸ್ವಾತಂತ್ರ್ಯ ನಮ್ಮ ಕೈ ಹಿಡಿಯಲು ಮನೆಯ ಬಾಗಿಲಿಗೆ ಬಂದಿದೆ. ನಾವೆಲ್ಲರೂ ಅದನ್ನು ಎದುರುಗೊಳ್ಳಬೇಕು. ಆದರೆ ದಿವಾನರು ಇಲ್ಲಿ ಅಡ್ಡಗೋಡೆಯಾಗಿದ್ದಾರೆ. ಇದು ನಮ್ಮ ಕೊನೆಯ ಹೋರಾಟ, ಎದ್ದೇಳಿ, ಪ್ರತಿಭಟಿಸಿ ಭಾರತ ಮಾತೆಯ ಕ್ರೌರ್ಯ ಪ್ರದರ್ಶಿಸಿ, ಕಾರ್ಮಿಕ ಬಂಧುಗಳೇ, ಕೆಲಸ ನಿಲ್ಲಿಸಿ ಈ ಕೊನೆಯ ಹೋರಾಟದಲ್ಲಿ ಪಾಲ್ಗೊಳ್ಳಿ, ವಿದ್ಯಾರ್ಥಿಗಳೇ ಶಾಲಾ ಕಾಲೇಜುಗಳನ್ನು ತ್ಯಜಿಸಿ ಹೊರಬನ್ನಿ, ನಮ್ಮನ್ನು ನಾವೇ ಪ್ರತಿನಿಧಿಸುವ ಸರ್ಕಾರ ಅಸ್ತಿತ್ವಕ್ಕೆ ಬರದಿದ್ದರೆ ನಾವೆಲ್ಲರೂ ಜೀವಂತ ಶವಗಳು. ಬ್ರಿಟಿಷ್ ಭಾರತದಲ್ಲಿ ನಮ್ಮ ಸಹೋದರರದು ಸ್ವಾತಂತ್ರ್ಯದ ಪವಿತ್ರ ವಾತಾವರಣದಲ್ಲಿ ಉಸಿರಾಡುತ್ತಿರುವಾಗ ಮಾದರಿ ಮೈಸೂರಿನ ಪ್ರಜೆಗಳಾದ ನಾವು ದಿವಾನರ ಅಧೀನದಲ್ಲಿ ಉಳಿಯುವುದು ಹೀನಾಯ ಮಾನ. ನಮ್ಮ ಆಜನ್ಮಸಿದ್ಧ ಹಕ್ಕಾದ ಸ್ವಾತಂತ್ರ್ಯ ದೊರಕುವವರೆಗೂ ಹೋರಾಟ ನಿಲ್ಲುವುದಿಲ್ಲ, ಎದ್ದೇಳಿ ಮಧುಗಿರಿಯ ವೀರಪುತ್ರರೇ ಎಂದು ಘರ್ಜಿಸಿ

ಸಭೆಯನ್ನು ಮುಕ್ತಾಯಗೊಳಿಸಿದರು. ಮಾರನೆಯ ದಿನ ಯಾರು ಯಾರು ಸತ್ಯಾಗ್ರಹ ಮಾಡಬೇಕು. ಧ್ವಜಾರೋಹಣ ಮಾಡಬೇಕು ಮುಂತಾದ ವಿಷಯಗಳನ್ನು ಚರ್ಚಿಸಿ ಮನೆಗೆ ಹಿಂತಿರುಗಿದ ಸ್ವಲ್ಪ ಸಮಯದಲ್ಲೇ ಮಾಲಿಮರಿಯಪ್ಪ ಮತ್ತು ಕೆ.ಹಂಜೇರಪ್ಪನವರನ್ನು ದಸ್ತಗಿರಿ ಮಾಡಿ ಬೆಂಗಳೂರಿನ ಸೆಂಟ್ರಲ್ ಜೈಲಿಗೆ ಕಳುಹಿಸಿದರು. ಕೊರಟಗೆರೆಯಲ್ಲಿ ಸತ್ಯಾಗ್ರಹಿಗಳು ಸೆಪ್ಟೆಂಬರ್ ೫ರಂದು ಶಾಂತ ರೀತಿಯಿಂದ ಕೊರಟಗೆರೆ ತಾಲ್ಲೂಕು ಕಛೇರಿಯ ಮೇಲೆ ಧ್ವಜಾರೋಹಣವನ್ನು ಮಾಡುವ ಪ್ರಯತ್ನ ಮಾಡಿದಾಗ ಪೊಲೀಸರು ಸತ್ಯಾಗ್ರಹಿಗಳ ಕೈಯಲ್ಲಿದ್ದ ಭಾವುಟವನ್ನು ಕಸಿದುಕೊಂಡು ಸತ್ಯಾಗ್ರಹಿಗಳನ್ನು ಬಂಧಿಸಿ ಎರಡು ದಿನಗಳ ನಂತರ ಬಿಡುಗಡೆ ಮಾಡಿದರು ಟಿ.ಆರ್.ಚೆನ್ನಪ್ಪ, ಚನ್ನಿಗರಾಮಯ್ಯ ಮತ್ತಿತರು ಪೋಲೀಸರು ಈ ಹಿಂದೆ ಕಸಿದುಕೊಂಡಿದ್ದ ಬಾವುಟವನ್ನು ಕೊಡಬೇಕೆಂದು ಕೇಳಿದರು ಆದರೆ ಅವರು ಒಪ್ಪಲಿಲ್ಲ. ಸುಮಾರು ಐದು ಗಂಟೆ ಸಮಯಕ್ಕೆ ಸತ್ಯಾಗ್ರಹಿಗಳ ಪೊಲೀಸರಿಂದ ಬಾವುಟವನ್ನು ಕಸಿದುಕೊಂಡು ಕಛೇರಿಯ ಮೇಲೆ ಧ್ವಜಾರೋಹಣ ಮಾಡಿ ಅಲ್ಲಿಂದ ಕಣ್ಮರೆಯಾದರು. ಅದೃಷ್ಟವಶಾತ್ ಅಂದು ರಾತ್ರಿಯೇ ಮೈಸೂರು ಸಂಸ್ಥಾನದಲ್ಲಿ ಬಂಧಿತರಾದ ಚಳುವಳಿಕಾರರನ್ನು ಬಿಡುಗಡೆ ಮಾಡಬೇಕೆಂದು ತೀರ್ಮಾನವಾದ್ದರಿಂದ ಅವರನ್ನು ಬಂಧಿಸಲಿಲ್ಲ. ಸೆಪ್ಟೆಂಬರ್ ೧೪ರಂದು ಚಳುವಳಿಗಾರರ ದೊಡ್ಡ ಗುಂಪೊಂದು ತುಮಕೂರಿನ ತಾಲ್ಲೂಕು ಕಛೇರಿ ಮೇಲೆ ಧ್ವಜಾರೋಹಣ ಕಾರ್ಯಕ್ರಮ ನಡೆಸಲು ಪ್ರಯತ್ನಿಸಿದಾಗ, ಪೊಲೀಸರು ಗುಂಪನ್ನು ಚದುರಿಸಲು ಗೋಲಿಬಾರ್ ನಡೆಸಿದರು. ಆಗ ಮಂಡಿ ನಂಜಪ್ಪ ಹಾಗೂ ಗೊರೂರು ರಾಮಸ್ವಾಮಿ ಅಯ್ಯಂಗಾರರ ಜೇಷ್ಠಪುತ್ರ ಹೈಸ್ಕೂಲ್‌ನಲ್ಲಿ ಓದುತ್ತಿದ್ದ ವಿದ್ಯಾರ್ಥಿ ರಾಮಚಂದ್ರ ಅವರು ಪೊಲೀಸರ ಗುಂಡಿಗೆ ಬಲಿಯಾಗಿ ಹುತಾತ್ಮರಾದರು. ಹಾಗೇಯೆ ಮೈಸೂರಿನಲ್ಲಿ ರಾಮಸ್ವಾಮಿ ಎಂಬ ವಿದ್ಯಾರ್ಥಿಯು ಪೊಲೀಸರ ಗುಂಡಿಗೆ ಬಲಿಯಾದದ್ದು ಇಡೀ ಸಂಸ್ಥಾನದ ಜನತೆಯಲ್ಲಿ ದಿಗ್ಭ್ರಾಂತಿಯನ್ನುಂಟುಮಾಡಿತು. ನೆರೆ ಹೊರೆಯ ಸಂಸ್ಥಾನಗಳ ಜನತೆಯು ಸಹ ಈ ಚಳುವಳಿಯಲ್ಲಿ ಸಕ್ರಿಯ ಪಾಲುಗಾರಿಕೆ ವಹಿಸಿದ್ದರು.[೧೮]

ಹೀಗೆ ಮೈಸೂರು ಸಂಸ್ಥಾನದಾದ್ಯಂತ ಮೈಸೂರು ಚಳುವಳಿಯು ಬಿರುಸಿನಿಂದ ನಡೆಯಿತು. ಕೊನೆಗೆ ಇಷ್ಟೊಂದು ಜನ ಬೆಂಬಲ ಪಡೆದಿದ್ದ ಕಾಂಗ್ರೆಸ್ ಚಳುವಳಿಯನ್ನು ಸಂಸ್ಥಾನದಲ್ಲಿ ಸರ್ಕಾರಕ್ಕೆ ಹತ್ತಿಕ್ಕಲಾಗಲಿಲ್ಲ. ಮಹಾರಾಜರು ತಾವು ಇಲ್ಲಿಯವರೆವಿಗೂ ಸುಮ್ಮನೆ ಇದ್ದದ್ದು ತಪ್ಪಾಯಿತೆಂದು ಪಶ್ಚಾತ್ತಾಪಟ್ಟು ಅಕ್ಟೋಬರ್ ೭ರಂದು ಜವಾಬ್ದಾರಿ ಸರ್ಕಾರ ಸ್ಥಾಪಿಸುವ ಇಚ್ಛೆಯನ್ನು ವ್ಯಕ್ತಪಡಿಸಿದರು. ಅಕ್ಟೋಬರ್ ೭ರಂದು ಬಂಧಿತರಾದ ಎಲ್ಲಾ ರಾಜಕೀಯ ಕೈದಿಗಳನ್ನು ಬಿಡುಗಡೆ ಮಾಡಿದರು. ಅಕ್ಟೋಬರ್ ೧೧ರಂದು ಸರ್ಕಾರ ಮತ್ತು ಕಾಂಗ್ರೆಸ್ಸಿನ ನಡುವೆ ಒಪ್ಪಂದ ನಡೆಯಿತು. ೨೪ರಂದು ಮಹಾರಾಜರು ಜವಾಬ್ದಾರಿ ಸರ್ಕಾರದ ಸ್ಥಾಪನೆಗೆ ಹಸಿರು ನಿಶಾನೆ ತೋರಿಸಿದರು. ಜವಾಬ್ದಾರಿ ಸರ್ಕಾರ ಸ್ಥಾಪನೆಯಾದ ನಂತರ ಕೆ.ಸಿ.ರೆಡ್ಡಿಯವರು ಪ್ರಥಮ ಮುಖ್ಯಮಂತ್ರಿಗಳಾಗಿ ಸರ್ಕಾರವನ್ನು ಸ್ಥಾಪಿಸಿದರು. ಆರ್.ಚನ್ನಿಗರಾಮಯ್ಯ, ಹೆಚ್.ಸಿದ್ಧಯ್ಯ, ಬಿ.ಸಿ.ದಾಸಪ್ಪ, ಕೆ.ಟಿ.ಭಾಷ್ಯಂ, ಟಿ.ಸಿದ್ಧಲಿಂಗಯ್ಯ ಹಾಗೂ ಮರಿಯಪ್ಪ ಇವರನ್ನೊಳಗೊಂಡ ಮಂತ್ರಿಮಂಡಲವನ್ನು ರಚಿಸಿ ಮೈಸೂರು ರಾಜ್ಯಕ್ಕೆ ಉತ್ತಮ ಆಡಳಿತವನ್ನು ನೀಡಿದರು.

## ಅಡಿಟಿಪ್ಪಣಿಗಳು


೧. ಕವಿತಾಕೃಷ್ಣ (ಸಂ)., ಜಯಮಂಗಲಿ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೨, ಪುಟ-೨೮

೨. ಎಂ.ಜಿ.ನಾಗರಾಜ್, ಡಾ.ಪಿ.ವಿ.ಕೃಷ್ಣಮೂರ್ತಿ (ಸಂ), ಇತಿಹಾಸ ದರ್ಶನ, ಸಂಪುಟ-೧೮, ಕರ್ನಾಟಕ ಇತಿಹಾಸ ಅಕಾಡೆಮಿ (ರಿ), ಬೆಂಗಳೂರು, ೨೦೦೩, ಪುಟ-೩೧೦

೩. ಅದೇ ಗ್ರಂಥ, ಪುಟ-೩೧೧

೪. ಡಾ.ಸೂರ್ಯನಾಥ ಕಾಮತ್ (ಸಂ)., ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಸಂಪುಟ-೩, ಗೀತಾ ಬುಕ್ ಹೌಸ್, ಮೈಸೂರು, ೧೯೭೭, ಪುಟ-೪೨೮

೫. ಎಂ.ಜಿ.ನಾಗರಾಜ್, ಡಾ.ಪಿ.ವಿ.ಕೃಷ್ಣಮೂರ್ತಿ (ಸಂ), ಇತಿಹಾಸ ದರ್ಶನ, ಸಂಪುಟ-೧೮, ಕರ್ನಾಟಕ ಇತಿಹಾಸ ಅಕಾಡೆಮಿ (ರಿ), ಬೆಂಗಳೂರು, ೨೦೦೩, ಪುಟ-೩೧೨

೬. ಅದೇ ಗ್ರಂಥ, ಪುಟ-೩೧೩

೭. ಎಸ್.ನಾಗರತ್ನಮ್ಮ, ತುಮಕೂರು ಜಿಲ್ಲೆಯಲ್ಲಿ ಸ್ವಾತಂತ್ರ್ಯ ಚಳುವಳಿ, ದೇಸಿ ಪುಸ್ತಕ ಪ್ರಕಾಶನ, ಬೆಂಗಳೂರು, ೨೦೦೯, ಪುಟ-೭೧

೮. ಅದೇ ಗ್ರಂಥ, ಪುಟ-೭೨

೯. ಅದೇ ಗ್ರಂಥ, ಪುಟ-೭೩

೧೦. ಅದೇ ಗ್ರಂಥ, ಪುಟ-೭೪

೧೧. ಅದೇ ಗ್ರಂಥ, ಪುಟ-೭೭

೧೨. ಸೂರ್ಯನಾಥ ಕಾಮತ್, ಕರ್ನಾಟಕದಲ್ಲಿ ಕ್ವಿಟ್ ಇಂಡಿಯಾ ಚಳುವಳಿ, ಲೋಕ ಶಿಕ್ಷಣ ಗ್ರಂಥಮಾಲೆ, ಹುಬ್ಬಳ್ಳಿ, ೧೯೯೨, ಪುಟ-೬೬

೧೩. ಅದೇ ಗ್ರಂಥ, ಪುಟ-೭೦

೧೪. ಎಸ್.ನಾಗರತ್ನಮ್ಮ, ತುಮಕೂರು ಜಿಲ್ಲೆಯಲ್ಲಿ ಸ್ವಾತಂತ್ರ್ಯ ಚಳುವಳಿ, ದೇಸಿ ಪುಸ್ತಕ ಪ್ರಕಾಶನ, ಬೆಂಗಳೂರು, ೨೦೦೯, ಪುಟ-೮೭

೧೫. ಅದೇ ಗ್ರಂಥ, ಪುಟ-೮೮

೧೬. ಕವಿತಾಕೃಷ್ಣ, ಸ್ವಾತಂತ್ರ ಶ್ರೀ, ಕವಿತಾ ಪ್ರಕಾಶನ, ತುಮಕೂರು, ೧೯೯೦, ಪುಟ-೧೮

೧೭. ಡಾ.ಬಿ.ನಂಜುಂಡಸ್ವಾಮಿ (ಸಂ), ಕಲ್ಪಸಿರಿ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೧, ಪುಟ-೨೬೪

೧೮. ಸಂದರ್ಶನ, ಶಿವರಾಮ್, ದಿನಾಂಕ ೧೫.೨.೨೦೧೨

ಅಧ್ಯಾಯ - ನಾಲ್ಕು

# ಆರ್.ಚನ್ನಿಗರಾಮಯ್ಯ ಅವರ ರಾಜಕೀಯ ಪ್ರವೇಶ ಹಾಗೂ ಸಾಧನೆಗಳು

೪.೧. ರಾಜಕೀಯ ಪ್ರವೇಶ

೪.೨. ಸ್ಥಳೀಯ ಸಂಸ್ಥೆಗಳು ಮತ್ತು ಅರಣ್ಯ ಮಂತ್ರಿಯಾಗಿ

೪.೩. ಶಿಕ್ಷಣ ಮತ್ತು ಕೃಷಿ ಮಂತ್ರಿಯಾಗಿ

ಅಧ್ಯಾಯ - ನಾಲ್ಕು

# ಆರ್.ಚನ್ನಿಗರಾಮಯ್ಯ ಅವರ ರಾಜಕೀಯ ಪ್ರವೇಶ ಹಾಗೂ ಸಾಧನೆಗಳು

ಪಾಳೇಗಾರಿಕೆಯಿಂದ ಪಾರಾಗಿ ನಮ್ಮ ರಾಷ್ಟ್ರ ಸ್ವತಂತ್ರ ರಾಷ್ಟ್ರವಾಗಿ ಪ್ರಜಾತಂತ್ರ ವ್ಯವಸ್ಥೆಯ ಗಣರಾಜ್ಯವಾಗಿ ನಮ್ಮ ರಾಷ್ಟ್ರದ ಪ್ರಜೆಗಳೇ ಪ್ರಭುಗಳಾಗಿ ಪ್ರಜಾರಾಜರುಗಳಾಗಿ ಪ್ರಜಾಪ್ರತಿನಿಧಿಗಳ ಮುಖಾಂತರ ಈ ರಾಷ್ಟ್ರ ಮತ್ತು ರಾಜ್ಯಗಳ ಆಡಳಿತ ಹಾಗೂ ಅಭಿವೃದ್ಧಿಯ ಚುಕ್ಕಾಣಿ ಹಿಡಿದು ಆಳುತ್ತಿದ್ದಾರೆ. ಪ್ರಜಾ ಪ್ರಭುತ್ವ ವ್ಯವಸ್ಥೆಯಲ್ಲಿ ವಿಧಾನಸಭೆಯ ಸದಸ್ಯರಾದ ಜನಪ್ರತಿನಿಧಿಗಳು ಈ ರಾಜ್ಯಗಳ ಆಡಳಿತ ಮತ್ತು ಅಭಿವೃದ್ಧಿಯನ್ನು ಲೋಕಸಭಾ ಸದಸ್ಯರಾದ ಜನಪ್ರತಿನಿಧಿಗಳು ಈ ರಾಷ್ಟ್ರದ ಆಡಳಿತ ಅಭಿವೃದ್ಧಿಯನ್ನು ಸಂಧಿಸುತ್ತಿದ್ದಾರೆ. ಭಾರತದ ಜನತೆ ಪ್ರಜಾರಾಜ್ಯದಲ್ಲಿ ವಿಶ್ವಾಸವಿಟ್ಟು ಅದರ ಯಶಸ್ಸಿಗಾಗಿ ಕೇಂದ್ರ ಸರ್ಕಾರಕ್ಕೆ ಲಕ್ಷಾಂತರ ಕೋಟಿ ಹಣವನ್ನು, ರಾಜ್ಯ ಸರಕಾರಗಳಿಗೆ ಸಹಸ್ರಾರುಕೋಟಿ ಹಣವನ್ನು ವಿವಿಧ ಕೆರೆ, ಕಂದಾಯ ಇತ್ಯಾದಿ ರಾಜಸ್ವ ಹಣವನ್ನು ಪ್ರತಿ ವರ್ಷ ಕೊಡುತ್ತಲೇ ಇದ್ದಾರೆ. ಈ ರಾಷ್ಟ್ರದ ಆಡಳಿತ ಅಭಿವೃದ್ಧಿ ಸಾಧನೆಗಾಗಿ ಶಾಸಕಾಂಗ ಕಾರ್ಯಾಂಗಗಳು ಸಂವಿಧಾನಬದ್ಧವಾಗಿ ರಚಿತವಾಗಿ ಅಸ್ತಿತ್ವದಲ್ಲಿವೆ.[೧]

ಪ್ರಜಾಪ್ರಭುತ್ವ ಎಂಬ ಆಡಳಿತವು ಪಶ್ಚಿಮದ ರಾಜಕೀಯ ಸಂದರ್ಭದಲ್ಲಿ ಜನನವಾಗಿ ಜನ ಪ್ರಭುತ್ವಕ್ಕೆ ಸೂಚಿಸಿರುವ ಪದವಾಗಿ ರೂಪಿಸಲ್ಪಟ್ಟಿದೆ. ಇದನ್ನೇ ಅಬ್ರಹಾಂ ಲಿಂಕನ್ ಜನರೇ ಜನರಿಗಾಗಿ ಜನರಿಂದ, ರಚಿಸಿಕೊಳ್ಳುವ ಆಡಳಿತ ವ್ಯವಸ್ಥೆಯೆಂದು ವ್ಯಾಖ್ಯಾನಿಸಿದ್ದಾನೆ. ಇಂತಹ ಆಡಳಿತ ವ್ಯವಸ್ಥೆಯನ್ನು ಮೈಸೂರು ಜನತೆ ಪಡೆಯಲು ಅನೇಕ ಕಷ್ಟ ಕಾರ್ಪಣ್ಯಗಳನ್ನು ಎದುರಿಸಿದರು. ಪ್ರಾಯೋಗಿಕ ಪ್ರತಿನಿಧಿ ಸಭೆಯು ಮುಂದುವರೆದು ಪ್ರಜಾಪ್ರಭುತ್ವದ ವೇದಿಕೆಯಾಯಿತು. ೧೯೩೮ರಲ್ಲಿ ಸ್ಥಾಪನೆಯಾದ ಮೈಸೂರು ಕಾಂಗ್ರೆಸ್ ಸಂಸ್ಥೆ ಎಲ್ಲಾ ರಾಜಕೀಯ ಬಣಗಳನ್ನು ಒಳಗೊಂಡಿದ್ದು ಬಲಿಷ್ಠ ಸಂಸ್ಥೆಯಾಗಿ ನಿರಂಕುಶಪ್ರಭುತ್ವವನ್ನು ದಮನ ಮಾಡುವ ಕಾರ್ಯಾಚರಣೆಯಲ್ಲಿ ತೊಡಗಿತು. ಮೈಸೂರು ಸಂಸ್ಥಾನದ ಜನತೆ ಪ್ರಜಾಪ್ರಭುತ್ವ ರಾಜ್ಯವನ್ನಾಗಿಸಲು ಅನೇಕ ರೀತಿಯ ಹೋರಾಟದಲ್ಲಿ ಪಾಲ್ಗೊಂಡಿದ್ದರು. ರಾಜತ್ವದ ವಿರುದ್ಧ ಅನೇಕ

ಸತ್ಯಾಗ್ರಹ, ಚಳುವಳಿಗಳನ್ನು ಮಾಡಲು ಮುಂದಾದರು. ಮೈಸೂರು ಸಂಸ್ಥಾನದಲ್ಲಿ ಬ್ರಿಟಿಷ್ ನೆಲೆಯಲ್ಲಿ ನಿರಂಕುಶ ರಾಜಪ್ರಭುತ್ವವು ಇದ್ದಿತು. ರಾಜಪ್ರಭುತ್ವವು ಜನರ ಚಳವಳಿಯಿಂದ ಅವನತಿಯತ್ತ ಸಾಗಿತು. ಕಾರ್ಲ್‌ಮಾರ್ಕ್ಸ್ ಮತ್ತು ಎಂಗೆಲ್ಸ್‌ರ ಪ್ರಕಾರ ನಿರಂಕುಶ ಪ್ರಭುತ್ವ ಒಂದು ರಾಜಕೀಯ ಪದ್ಧತಿಯ ಬಂಡವಾಳದ ಪ್ರಬಲತೆ, ರಾಜಪ್ರಭುತ್ವದ ಅಧಿಕಾರದ ಸ್ವರೂಪವನ್ನು ಗಮನಿಸಿ ನಿರಂಕುಶ, ಉದಾರವಾದಿ ಹಾಗೂ ಪ್ರಜ್ಞಾವಂತ ಎಂಬುದಾಗಿ ಸರ್ಕಾರದ ವಿವಿಧ ಮಾದರಿಗಳನ್ನು ಕಾಣಬಹುದಾಗಿದೆ.

೧೯೪೭ರ ಆಗಸ್ಟ್ ೧೫ರಂದು ಭಾರತಕ್ಕೆ ಸ್ವಾತಂತ್ರ್ಯ ಲಭಿಸಿದ ಮೈಸೂರು ಸಂಸ್ಥಾನದಲ್ಲಿ ರಾಜಪ್ರಭುತ್ವವೇ ಉಳಿದು ಅಧಿಕಾರದ ಲಾಲಸೆಯನ್ನು ಎತ್ತಿ ತೋರಿಸುತ್ತಿತ್ತು. ಹಿಂದಿನಿಂದಲೂ ರಾಜಶಾಹಿಪ್ರಭುತ್ವವನ್ನು ಪ್ರಶ್ನಿಸುತ್ತಾ ಬಂದ ಮೈಸೂರು ಜನತೆ ಜವಾಬ್ದಾರಿ ಸರ್ಕಾರ ರಚನೆಗೆ ಒಂದು ಚಳುವಳಿಯನ್ನು ಹಮ್ಮಿಕೊಂಡರು. ಅದು ಮೈಸೂರು ಚಲೋ ಚಳುವಳಿ. ಈ ಚಳವಳಿಯು ರಾಜಪ್ರಭುತ್ವವನ್ನು ಬಲಯುತವಾಗಿ ಪ್ರಶ್ನಿಸಿತು. ರಾಜನನ್ನು ರಾಜಪ್ರಭುತ್ವದಿಂದ ಕೆಳಗಿಳಿಸಲು ಮತ್ತು ಅವನ ಅಧಿಕಾರವನ್ನು ಮೊಟಕುಗೊಳಿಸಲು ಪ್ರಯತ್ನಿಸಿದರು. ಈ ಜನಪ್ರಭುತ್ವದಲ್ಲಿ ವರ್ಗ, ಭಾಷೆ, ಸಂಸ್ಕೃತಿ, ಜಾತಿಗಳಂಥ ಅಂಶಗಳ ಬೇಧವಿಲ್ಲದೆ. ಪ್ರಜೆಗಳೆಲ್ಲರೂ ಸಮಾನರು ಎಂಬ ನೀತಿಯನ್ನು ಅಳವಡಿಸಿಕೊಂಡಿದ್ದರು. ಈ ಪ್ರಜಾಪ್ರಭುತ್ವ ವ್ಯವಸ್ಥೆಯು ಜನರನ್ನು ಸಮರ್ಥವಾಗಿ ಪ್ರತಿನಿಧಿಸುವಂತದ್ದು. ರಾಜಪ್ರಭುತ್ವವು ಮೈಸೂರು ಸಂಸ್ಥಾನದಲ್ಲಿ ಉಗಮದಿಂದ ಕೊನೆಯವರೆಗೂ ವಿರೋಧಗಳನ್ನು ಎದುರಿಸುತ್ತಲೇ ಇತ್ತು. ಕೊನೆಗೆ ಜನತೆಯು ಹಮ್ಮಿಕೊಂಡ ಚಳುವಳಿಯಿಂದ ರಾಜಪ್ರಭುತ್ವವು ನಿರ್ನಾಮವಾಗಿ ಪ್ರಜಾಪ್ರಭುತ್ವವು ಮೈಸೂರಿನಲ್ಲಿ ಸ್ಥಾಪಿತವಾಯಿತು. ಆಧುನಿಕ ಪ್ರಜಾಪ್ರಭುತ್ವವು ಪ್ರಜಾಪ್ರತಿನಿಧಿಕ ತತ್ವವನ್ನು ಆಧರಿಸಿದೆ. ಈ ತರಹದ ಒಂದು ಪದ್ಧತಿಯಲ್ಲಿ ಜನರು ತಮ್ಮ ಅಧಿಕಾರವನ್ನು ತಮ್ಮನ್ನೇ ಪ್ರತಿನಿಧಿಸುವ ಪ್ರಜಾಪ್ರತಿನಿಧಿಗಳಿಗೆ ನಿಗದಿತ ಅವದಿಗೆಂದು ಸೀಮಿತಗೊಳಿಸಲಾಗಿದೆ. ಸ್ವಾತಂತ್ರ್ಯ ನಂತರ ಪ್ರಜೆಗಳಿಗೆ ಲಭಿಸಿದ ರಾಜಕೀಯ ಸ್ವಾತಂತ್ರ್ಯ ತಮಗೆ ಬೇಕಾದ ಪ್ರಭುತ್ವವನ್ನು ಆರಿಸುವ ಹಾಗೂ ಅಧಿಕಾರಕ್ಕೆ ತರುವ ಹಕ್ಕನ್ನು ನೀಡಿತು. ಇದು ಯಾವ ಸ್ವರೂಪದ ರಾಜಪ್ರಭುತ್ವದಲ್ಲಾದರೂ ಸಾಧ್ಯವಿರಲಿಲ್ಲ. ಇದರಿಂದಾಗಿ ಸಾಮಾನ್ಯ ವರ್ಗದ ಜನತೆಯು ಸಹ ಅಧಿಕಾರದ ಚುಕ್ಕಾಣಿ ಹಿಡಿಯುವಂತಾಯಿತು. ಈ ನಿಟ್ಟಿನಲ್ಲಿ ಚನ್ನಿಗರಾಮಯ್ಯನವರು ಒಬ್ಬ ಸಾಮಾನ್ಯ ಬಡ ದಲಿತ ಕುಟುಂಬದಿಂದ ಬಂದಿದ್ದರೂ ಕರ್ನಾಟಕದ ಪ್ರಥಮ ಮಂತ್ರಿಮಂಡಲದಲ್ಲಿ ಸ್ಥಾನವನ್ನು ಪಡೆಯಲು ಸಹಕಾರಿಯಾಯಿತು. ಪ್ರತಿಯೊಬ್ಬರಿಗೂ ಸಹ ರಾಜಕೀಯ ಅವಕಾಶಗಳನ್ನು ಪ್ರಜಾಪ್ರಭುತ್ವ ಸರ್ಕಾರ ಒದಗಿಸಿದೆ.

ಅಕ್ಟೋಬರ್ ೨೪ ಸಂಸ್ಥಾನದ ಇತಿಹಾಸದಲ್ಲಿ ಸ್ಮರಣೀಯವಾದ ದಿನ. ರಾಷ್ಟ್ರ ನಾಯಕರು ಸಂಸ್ಥಾನದ ಆಡಳಿತ ಸೂತ್ರಗಳನ್ನು ವಹಿಸಿಕೊಂಡು ಸಂಪೂರ್ಣ ಪ್ರಜಾಪ್ರಭುತ್ವಕ್ಕೆ ಶಂಕುಸ್ಥಾಪನೆಯನ್ನು ಮಾಡಲು ಸೂಕ್ತ ಕಾರ್ಯಕ್ರಮಗಳನ್ನು ಕೈಗೊಂಡ ದಿನ. ಇಂತಹ ಸಮಯದ ಆಗಮನವನ್ನು ಸಂಸ್ಥಾನದ ಪ್ರಜೆಗಳು ಬಹುಕಾಲದಿಂದಲೂ ಕುತೂಹಲದಿಂದ ನಿರೀಕ್ಷಿಸಿದ್ದರು. ಅದಕ್ಕಾಗಿ ಅಪಾರ ಕಷ್ಟ ನಷ್ಟಗಳನ್ನು ಅನುಭವಿಸಿದ್ದರು.

ಅದರ ಫಲವಾಗಿ ಅಂದು ಪ್ರಜಾವರ್ಗದವರ ಹಕ್ಕಾದ ಜವಾಬ್ದಾರಿಯುತ ಸರ್ಕಾರವನ್ನು ಗಳಿಸಿದರು. ರಾಜಕೀಯ ಜೀವನದ ಉನ್ನತ ಧ್ಯೇಯವಾದ ಪ್ರಜಾಪ್ರಭುತ್ವವನ್ನು ಸ್ಥಾಪಿಸಲು ಪ್ರಜೆಗಳು ಸಹಕರಿಸಿದ್ದರ ಪರಿಣಾಮವಾಗಿ ೧೯೪೭ರ ಅಕ್ಟೋಬರ್ ೨೪ರಂದು ಮಧ್ಯಾಹ್ನ ಹೊಸ ಮಂತ್ರಿಮಂಡಲ ಸದಸ್ಯರು ಅಠಾರಾ ಕಛೇರಿಯಲ್ಲಿ ಅಧಿಕಾರವನ್ನು ವಹಿಸಿಕೊಂಡರು. ಮೈಸೂರು ಚಲೋ ಚಳವಳಿ ಯಶಸ್ವಿಯಾಗಿ ಜವಾಬ್ದಾರಿ ಸರ್ಕಾರವನ್ನು ರಾಜ್ಯಕ್ಕೆ ತಂದುಕೊಟ್ಟ ಫಲವಾಗಿ ಮೊದಲನೇ ಮಂತ್ರಿಮಂಡಲದಲ್ಲಿ ಒಂಬತ್ತು ಮಂದಿ ಶಾಸಕರು ಮಂತ್ರಿಗಳಾದರು. ಅವರಲ್ಲಿ ಆರು ಮಂದಿ ಕಾಂಗ್ರೆಸ್ ಮಂತ್ರಿಗಳು, ಮೂರು ಮಂದಿ ಕಾಂಗ್ರೆಸ್ಸೇತರ ಮಂತ್ರಿಗಳು. ೧೯೪೭ರ ಅಕ್ಟೋಬರ್ ೨೯ರಂದು ಹೊಸದಾಗಿ ಆಯ್ಕೆಯಾದ ಮಂತ್ರಿಗಳು ಬೆಳಗ್ಗೆ ೧೦ ಘಂಟೆಗೆ ಅರಮನೆಯ ಅಂಭಾ ವಿಲಾಸದಲ್ಲಿ ಮಹಾರಾಜರ ಸಮ್ಮುಖದಲ್ಲಿ ಪ್ರಮಾಣ ವಚನ ಸ್ವೀಕರಿಸಿದರು. ಅಂದು ಸರ್ಕಾರದ ಪ್ರಧಾನ ಕಾರ್ಯದರ್ಶಿಗಳಾದ ವೇದ ವ್ಯಾಸಾಚಾರ್ಯರು ಮಂತ್ರಿಗಳನ್ನು ಒಬ್ಬೊಬ್ಬರಾಗಿ ಪ್ರಭುಗಳ ಸನ್ನಿಧಿಗೆ ಕರೆದುಕೊಂಡು ಹೋದರು. ಮಂತ್ರಿಗಳು ಆಂಗ್ಲ ಭಾಷೆಯಲ್ಲಿ ಪ್ರಮಾಣ ವಚನವನ್ನು ಸ್ವೀಕರಿಸಿದರು. ಆ ಪ್ರಮಾಣ ವಚನವು ಈ ರೀತಿ ಇದೆ. ಶ್ರೀಮಾನ್ ಮಹಾರಾಜರಲ್ಲಿ ರಾಜಭಕ್ತಿಯನ್ನು ಸೂಚಿಸಿ, ಅವರಲ್ಲಿಯೂ, ಅವರ ಆಡಳಿತದಲ್ಲಿಯೂ ಮತ್ತು ಪ್ರಜಾಕೋಟಿಯಲ್ಲಿ ಸಂಪೂರ್ಣ ಶ್ರದ್ಧಾ ಭಕ್ತಿಗಳನ್ನು ಇಟ್ಟು ಸ್ವಾರ್ಥ ಅಥವಾ ಪಂಗಡಗಳ ಹಿತವನ್ನು ಲಕ್ಷಿಸದೆ ಸಂಸ್ಥಾನದ ಸೇವೆಗಾಗಿ ಕಂಕಣಬದ್ಧರಾಗಿರುವುದಾಗಿಯೂ ಮತ್ತು ತಮಗೆ ವಹಿಸುವ ಅಂತರಂಗದ ವಿಷಯಗಳನ್ನು ರಹಸ್ಯವಾಗಿಡುವುದಾಗಿಯೂ ಮತ್ತು ಆತ್ಮಸಾಕ್ಷಿಗೆ ಅನುಗುಣವಾಗಿ ಪ್ರಭುಗಳ ನಿಜವಾದ ಸೇವಕರಂತೆ ನಡೆದುಕೊಳ್ಳುವುದಾಗಿಯೂ ಸಚಿವರು ತಮ್ಮ ಪ್ರಮಾಣ ವಚನದಲ್ಲಿ ಘೋಷಿಸಿದರು. ಅಂದು ಸುಮಾರು ೨೦೦ ಜನ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು. ೧೯೪೭ ಅಕ್ಟೋಬರ್ ೨೪ರಂದು ಮೈಸೂರು ರಾಜ್ಯ ಪತ್ರದ ವಿಶೇಷ ಸಂಚಿಕೆ ಪ್ರಕಟವಾಗಿ ನಾಡಿನ ಮಂತ್ರಿಗಳ ಹೆಸರನ್ನು ಘೋಷಿಸಿತು. ಅದರಂತೆ ಕಾಂಗ್ರೆಸ್ ಮಂತ್ರಿಗಳು ಆರು ಜನ:

೧. ಕೆ.ಸಿ.ರೆಡ್ಡಿ - ಮುಖ್ಯಮಂತ್ರಿ, ಆಹಾರ, ರೆವಿನ್ಯೂ ಖಾತೆ

೨. ಹೆಚ್.ಸಿ.ದಾಸಪ್ಪ - ವ್ಯವಸಾಯ

೩. ಕೆ.ಟಿ.ಭಾಷ್ಯಂ - ಗೃಹಖಾತೆ

೪. ಹೆಚ್.ಸಿದ್ಧಯ್ಯ - ಆರೋಗ್ಯ

೫. ಟಿ.ಮರಿಯಪ್ಪ - ರೈಲ್ವೆ ಮತ್ತು ಕಾರ್ಮಿಕ ಖಾತೆ

೬. ಆರ್. ಚನ್ನಿಗರಾಮಯ್ಯ - ಸ್ಥಳೀಯ ಸಂಸ್ಥೆಗಳು

ಕಾಂಗ್ರೆಸ್ಸೇತರ ಮಂತ್ರಿಗಳು

೧. ಸುಬ್ಬರಾಮ ಶೆಟ್ಟಿ - ಕೈಗಾರಿಕೆ

೨. ಮಹಮ್ಮದ್ ಷರೀಫ್ - ಹಣಕಾಸು

೩. ಹೆಚ್.ಚಂದ್ರಶೇಖರಯ್ಯ - ವಿದ್ಯಾಭ್ಯಾಸ

ಈ ನೂತನ ಮಂತ್ರಿ ಮಂಡಲವನ್ನು ರಚಿಸಿದ ಮೇಲೂ ಎರಡು ವರ್ಷ ಕಾಲ ದಿವಾನ ಪದವಿ ಮುಂದುವರಿಯಿತು. ಅದುವರೆಗೂ ದಿವಾನರಾಗಿದ್ದ ಆರ್ಕಾಟ್ ರಾಮಸ್ವಾಮಿ ಮೊದಲಿಯಾರ್ ಆಗಸ್ಟ್ ೧೯೪೯ರಲ್ಲಿ ನಿವೃತ್ತರಾದರು. ದಿವಾನರ ಕಾರ್ಯಗಳನ್ನು ಮುಖ್ಯಮಂತ್ರಿಗಳು ವಹಿಸಿಕೊಂಡರು. ಚನ್ನಿಗರಾಮಯ್ಯನವರು ಸ್ಥಳೀಯ ಸಂಸ್ಥೆಗಳ ಇಲಾಖೆಯನ್ನು ವಹಿಸಿಕೊಂಡು ಪ್ರಾಮಾಣಿಕತೆ, ದಕ್ಷತೆಯಿಂದ ಇಲಾಖೆಯನ್ನು ಮುನ್ನಡೆಸಿದರು. ಈ ಒಂದು ಇಲಾಖೆಯಲ್ಲಿ ಇರುವಂತ ನ್ಯೂನತೆಗಳನ್ನು ಹೋಗಲಾಡಿಸಿ. ಸೂಕ್ತವಾದ ರೀತಿಯಲ್ಲಿ ಸ್ಥಳೀಯ ಸಂಸ್ಥೆಗಳ ಇಲಾಖೆಯನ್ನು ಅಭಿವೃದ್ಧಿಪಡಿಸಬೇಕೆಂಬ ಆಶಯವನ್ನು ಹೊಂದಿದ್ದು ಅದಕ್ಕಾಗಿ ಅವರು ಹಲವಾರು ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಿದರು.

## ೪.೧. ರಾಜಕೀಯ ಪ್ರವೇಶ

ಕರ್ನಾಟಕ ಕಂಡ ಜನಪರ ಕಾಳಜಿಯ ರಾಜಕಾರಣಿಗಳಲ್ಲಿ ಆರ್.ಚನ್ನಿಗರಾಮಯ್ಯ ಅವರು ಪ್ರಮುಖರು. ೧೯೩೦ರ ದಶಕದಿಂದ ಸತತವಾಗಿ ಕರ್ನಾಟಕದ ಸಾರ್ವಜನಿಕ ಬದುಕಿನಲ್ಲಿ ಇವರು ರಾಜ್ಯದ ಗಮನ ಸೆಳೆಯುತ್ತಾ ಬಂದವರು. ಹಳ್ಳಿಗಾಡಿನ ಕುಟುಂಬದಿಂದ ಬಂದು ಕಷ್ಟ ಕೋಟಲೆಗಳ ನಡುವೆ ಮತ್ತು ಗಾಂಧೀಜಿಯವರ ವಿಚಾರಧಾರೆಗಳಿಂದ ಪ್ರಭಾವಿತರಾಗಿ ಸಾರ್ವಜನಿಕ ಜೀವನ ಪ್ರವೇಶಿಸಿದರು. ಕ್ರಿಯಾಶೀಲ ಹಾಗೂ ಗ್ರಾಮೀಣ ಬದುಕಿನ ಬಗ್ಗೆ ಅಸಾಧಾರಣ ಬದ್ಧತೆಯುಳ್ಳ ರಾಜಕಾರಣಿಯಾಗಿದ್ದರು. ರಾಜಕೀಯದ ಜೊತೆ ಜೊತೆಯಲ್ಲಿಯೇ ನಾಡು ನುಡಿಯ ಪ್ರೀತಿ, ಸಾಹಿತ್ಯ ಕಲೆಗಳ ಅಭಿರುಚಿ, ದೀನದಲಿತರ ಬಗೆಗಿನ ಕಾಳಜಿ, ಅವರ ಏಳಿಗೆಗಾಗಿ ಹೋರಾಟ, ಹೀಗೆ ಹತ್ತು ಹಲವು ಜನಪರವಾದ ಕಾರ್ಯಗಳಲ್ಲಿ ತಮ್ಮನ್ನು ಪ್ರಾಮಾಣಿಕವಾಗಿ ತೊಡಗಿಸಿಕೊಂಡವರು. ಚನ್ನಿಗರಾಮಯ್ಯ ಅವರ ಹೆಚ್ಚುಗಾರಿಕೆ ಎಂದರೆ ಅಧಿಕಾರ ಇರಲಿ, ಇಲ್ಲದಿರಲಿ ತಾವು ಕೈಗೊಂಡ ಕಾರ್ಯವನ್ನು ಛಲದಿಂದ ಮುನ್ನಡೆಸುವುದು. ಅಧಿಕಾರದ ಲಾಲಸೆಯಿಂದ ತಮ್ಮ ಉದ್ದೇಶವನ್ನು ಎಂದೂ ಕೈಬಿಟ್ಟವರಲ್ಲ. ಉದ್ದೇಶದ ಈಡೇರಿಕೆಗಾಗಿ ನಿರಂತರ ಹೋರಾಟ ನಡೆಸುತ್ತಾ ಬಂದ ಧೀಮಂತ ರಾಜಕಾರಣಿ. ಅನೇಕ ವೇಳೆ ಅವರ ಮಾತು ನಿಷ್ಠುರ, ನೇರ, ಆದರೆ ಮನಸ್ಸು ಮೃದು. ಅಷ್ಟೇ ಸ್ನೇಹಮಯಿ, ಸಹೃದಯಿ ಪ್ರಜ್ಞಾವಂತ ರಾಜಕಾರಣಿ ಚನ್ನಿಗರಾಮಯ್ಯ ಅವರು ರೈತಾಪಿ ವರ್ಗದಿಂದ ಬಂದವರು. ಗ್ರಾಮೀಣ ಸಮಸ್ಯೆಗಳನ್ನು ಚೆನ್ನಾಗಿ ಅರಿತವರು. ಅವುಗಳ ಪರಿಹಾರಕ್ಕಾಗಿ ಶ್ರಮಿಸಿದವರು. ದೀನದಲಿತರ ಉದ್ಧಾರದ ಕನಸು ಕಂಡು ಅದಕ್ಕಾಗಿ ಛಲದಿಂದ ಹೋರಾಡುವ ಮನೋಧರ್ಮವನ್ನು ಬೆಳಸಿಕೊಂಡವರು. ಅಪ್ಪಟ ಕ್ರಿಯಾಶೀಲ ರಾಜಕಾರಣಿ ಎಂದೇ ಕರೆಸಿಕೊಳ್ಳುವ ಅರ್ಹತೆಗೆ ಪಾತ್ರರಾಗಿ ಆ ಎತ್ತರಕ್ಕೆ ಏರುತ್ತ ಬಂದವರು. ಇಂತಹ ಚನ್ನಿಗರಾಮಯ್ಯನವರು ೧೯೩೨ರಲ್ಲಿ ಕೊರಟಗೆರೆ ಪುರಸಭೆಯ ಸದಸ್ಯರಾಗಿ ಆಯ್ಕೆಯಾಗುವುದರ ಮೂಲಕ ರಾಜಕೀಯವನ್ನು ಪ್ರವೇಶಿಸಿದರು. ನಂತರ ತುಮಕೂರು ಜಿಲ್ಲಾ ಬೋರ್ಡಿನ ಸದಸ್ಯರಾಗಿ ಕಾರ್ಯ ನಿರ್ವಹಿಸಿದರು. ೧೯೩೭ರಲ್ಲಿ ಸ್ವತಂತ್ರಪೂರ್ವದ ಮೈಸೂರು ಸಂಸ್ಥಾನದ ಪ್ರಜಾಪ್ರತಿನಿಧಿ ಸಭೆಯ ಸದಸ್ಯರಾಗಿ ಮಹಾರಾಜರೊಂದಿಗೆ ಈ ಸಂಸ್ಥಾನದ ಅಭಿವೃದ್ಧಿಗಾಗಿ ಶ್ರಮಿಸಿದರು. ೧೯೩೮-೪೦ರಲ್ಲಿ ಮೈಸೂರು ಸುಧಾರಣಾ ಸಮಿತಿ, ಡಿ.ಲಿಮಿಟೇಷನ್ ಸಮಿತಿ ಸದಸ್ಯರಾಗಿ ಆರಿಸಲ್ಪಟ್ಟರು. ೧೯೪೧ರಲ್ಲಿ ಲೆಜಿಸ್ಲೇಟಿವ್ ಕೌನ್ಸಿಲ್‌ನ ಸದಸ್ಯರಾಗಿ ನಾಮಕರಣ ಮಾಡಲ್ಪಟ್ಟರು.

ನಂತರದ ದಿನಗಳಲ್ಲಿ ಕೊರಟಗೆರೆ ಮಧುಗಿರಿ ಮೀಸಲು ವಿಧಾನಸಭಾ ಕ್ಷೇತ್ರದಿಂದ ೧೯೫೭ರಲ್ಲಿ ವಿಧಾನಸಭೆಯ ಸದಸ್ಯರಾಗಿ ಆಯ್ಕೆಗೊಂಡು ಕರ್ನಾಟಕ ರಾಜ್ಯದ ಮೊಟ್ಟಮೊದಲ ಮುಖ್ಯಮಂತ್ರಿ ಕೆ.ಸಿ.ರೆಡ್ಡಿಯವರ ಸಚಿವಸಂಪುಟದಲ್ಲಿ ಏಕೈಕ ದಲಿತ ಮಂತ್ರಿಗಳಾಗಿ ಕಾರ್ಯ ನಿರ್ವಹಿಸಿದರು. ಅರಣ್ಯಖಾತೆ, ಸ್ಥಳೀಯ ಸಂಸ್ಥೆಗಳ ಖಾತೆ, ಶಿಕ್ಷಣ, ಕೃಷಿ, ರೇಷ್ಮೆ ಹೀಗೆ ಅನೇಕ ಖಾತೆಗಳನ್ನು ಸಮರ್ಥವಾಗಿ ನಿಭಾಯಿಸಿ ಕರ್ನಾಟಕ ರಾಜ್ಯದ ಅಭಿವೃದ್ಧಿಗಾಗಿ ಶ್ರಮಿಸಿದರು. ಕೆ.ಪಿ.ಎಸ್.ಸಿ ಅಧ್ಯಕ್ಷರಾಗಿ ಕೆಲವು ದಿನಗಳ ಕಾಲ ದಕ್ಷತೆ, ಪ್ರಾಮಾಣಿಕತೆಯಿಂದ ಕಾರ್ಯ ನಿರ್ವಹಿಸಿದರು. ಶ್ರೀಯುತರು ಡೆಪ್ಯೂಟಿ ಸ್ಪೀಕರ್ ಆಗಿ ಕಾರ್ಯನಿರ್ವಹಿಸಿದರು. ಹೌಸಿಂಗ್ ಬೋರ್ಡ್ ಛೇರ್ಮನ್ ಆಗಿ ಹಲವಾರು ಜನಪರ ಕೆಲಸಗಳನ್ನು ಮಾಡಿದರು. ಚನ್ನಿಗರಾಮಯ್ಯನವರು ನಾಲ್ಕು ದಶಕಗಳ ಕಾಲ ಸಾರ್ವಜನಿಕ ಜೀವನದಲ್ಲಿದ್ದ ತಮ್ಮ ತತ್ವ ನಿಷ್ಠೆ, ನಿರ್ಭೀತಿಯ ರಾಜಕಾರಣ ಹಾಗೂ ತಮ್ಮದೇ ಆದ ವಿಶಿಷ್ಟವಾದ ರೀತಿಯ ಹೋರಾಟದ ಜನಪರ ಕಾರ್ಯ ಶೈಲಿಗಳಿಂದಾಗಿ ಕರ್ನಾಟಕ ರಾಜಕಾರಣದಲ್ಲಿ ಹೆಸರಾಗಿದ್ದಾರೆ.

ಜನತೆಗೆ ಅನುಕೂಲವಾಗುವಂತಹ ಯಾವುದೇ ಬಗೆಯ ಕಾರ್ಯ ಯೋಜನೆಗಳನ್ನು ಅನುಷ್ಠಾನಗೊಳಿಸಲು, ಯಾವ ಅಂಜಿಕೆಯೂ ಇಲ್ಲದೆ, ಕೊನೆಗೆ ವ್ಯಕ್ತಿ ಸಂಬಂಧಗಳನ್ನು ನಿರ್ಲಕ್ಷಿಸಿ ಎಡರುತೊಡರುಗಳನ್ನು ದಾಟಿಕೊಂಡು ಸದಾ ಹರಿಯುವ ನೀರಿನಂತೆ ತಣ್ಣಗೆ ಮುನ್ನುಗ್ಗುವ ಗುಣ ಚನ್ನಿಗರಾಮಯ್ಯನವರ ತುಂಬು ಹೃದಯದ ವ್ಯಕ್ತಿತ್ವದಲ್ಲಿದೆ. ಅಸಮಾನತೆ ಭ್ರಷ್ಟತೆಗಳೆದುರು ಜ್ವಾಲಾಮುಖಿಯಂತೆ ಸ್ಫೋಟಿಸುವ ಇವರ ವ್ಯಕ್ತಿತ್ವವು, ಒಳ್ಳೆಯತನಕ್ಕೆ ಅಷ್ಟೇ ಹೂವಿನಂತೆ ಸ್ಪಂದಿಸುತ್ತದೆ. ಕರ್ನಾಟಕ ರಾಜಕಾರಣದಲ್ಲಿ ದಲಿತರ ನೋವಿಗೆ ದನಿ ನೀಡಿದ ಪ್ರಥಮ ವ್ಯಕ್ತಿ ಹಲವಾರು ಇಲಾಖೆಗಳಲ್ಲಿ ಮಂತ್ರಿಯಾಗಿ ಅಸ್ಪೃಶ್ಯರ ಬದುಕಿನಲ್ಲಿ ಚೈತನ್ಯ ಸೃಷ್ಟಿಸಿದ್ದರು ದಲಿತ ಮಕ್ಕಳಿಗೆ ವಿದ್ಯಾರ್ಥಿ ನಿಲಯ, ವಿದ್ಯಾರ್ಥಿ ವೇತನ, ದಲಿತರ ಸಾಮಾಜಿಕ ಹಾಗೂ ಆರ್ಥಿಕಾಭಿವೃದ್ಧಿಗೆ ಒತ್ತು ನೀಡಿ ಅಸ್ಪೃಶ್ಯರ ಬಾಳಿಗೆ ಭದ್ರಬುನಾದಿ ಹಾಕಿದರು. ನಿಸ್ವಾರ್ಥ, ದಲಿತ ಸೇವಕನಾಗಿ ಕಾರ್ಯ ನಿರ್ವಹಿಸಿದರು. ತಮ್ಮ ಜೀವನ ಪೂರ್ತಿ ಸಮಾಜ ಸೇವೆಗೆ ಪ್ರಾಮುಖ್ಯತೆಯನ್ನು ಕೊಟ್ಟಂತಹ ಚನ್ನಿಗರಾಮಯ್ಯನವರು ಸಮಾಜದ ಎಲ್ಲಾ ವರ್ಗಗಳ ಪ್ರೀತಿಗೆ ಪಾತ್ರರಾಗಿದ್ದರು. ಅವರು ಮಂತ್ರಿಯಾಗಿ ಮಾಡಿದ ಸೇವೆ ಗಮನಾರ್ಹವಾದುದಾಗಿದೆ. ಮುಂದಿನ ಪೀಳಿಗೆಯವರಿಗೆ ಆದರ್ಶವಾಗಿ ಪ್ರಾಮಾಣಿಕತೆಯಿಂದ ಆಡಳಿತ ನಡೆಸಿದರು.

### ೪.೨. ಸ್ಥಳೀಯ ಸಂಸ್ಥೆಗಳು ಮತ್ತು ಅರಣ್ಯ ಮಂತ್ರಿಯಾಗಿ

ಆರ್.ಚನ್ನಿಗರಾಮಯ್ಯನವರು ಅತ್ಯಂತ ಶೋಷಿತ ಅಸ್ಪೃಶ್ಯ ವರ್ಗದ ಕುಟುಂಬವೊಂದರಲ್ಲಿ ಜನಿಸಿದವರು. ಅವರು ಜನಿಸುವ ಸಂದರ್ಭದಲ್ಲಿ ಭಾರತದ ಸ್ವಾತಂತ್ರ್ಯ ಸಂಗ್ರಾಮದ ಹೋರಾಟವು ಎರಡನೇ ಹಂತಕ್ಕೆ ತಲುಪಿತ್ತು. ತುಮಕೂರು ಜಿಲ್ಲೆಯಲ್ಲಿ ಕಾಂಗ್ರೆಸ್ಸಿನ ಹೋರಾಟದ ಮುಂಚೂಣಿಯಲ್ಲಿ ಸೇವೆ ಸಲ್ಲಿಸುತ್ತಿರುವಾಗಲೇ ಗಾಂಧೀಜಿಯವರಿಗೆ ಬಹು ಹತ್ತಿರವಾದರು. ಅತ್ಯಂತ ಚಿಕ್ಕ ವಯಸ್ಸಿನಲ್ಲಿ ಒಬ್ಬ ಯಶಸ್ವಿ ಸಂಘಟಕನಾಗಿ ಹೊರ ಹೊಮ್ಮಿದರು. ನೌಕರಿಯನ್ನು ತ್ಯಜಿಸಿ ಸಂಪೂರ್ಣವಾಗಿ ಅವರು ಸಾಮಾಜಿಕ ಸೇವೆಗಳಲ್ಲಿ

ತೊಡಗಿಸಿಕೊಂಡರು. ನೊಂದ ಜನರಿಗೆ ಆದ ತೊಂದರೆಗಳಿಗೆ ಸ್ಪಂದಿಸಿ ಸರ್ವಜನರ ನಿಕಟವರ್ತಿಯಾದರು. ೧೯೪೭ರಲ್ಲಿ ಮೀಸಲು ಕ್ಷೇತ್ರವಾದ ಕೊರಟಗೆರೆ ಕ್ಷೇತ್ರದಿಂದ ಆಯ್ಕೆಯಾಗಿ ವಿಧಾನಸಭಾ ಸದಸ್ಯರಾದರು. ಕಾಂಗ್ರೆಸ್ ಪಕ್ಷದ ಸಿಪಾಯಿಯಂತಿದ್ದ ಅವರು ಆರಂಭದ ಪ್ರೌಢ ದಿನಗಳಲ್ಲಿಯೇ ಅತ್ಯಂತ ಚಾಣಾಕ್ಷ ಸಮಾಜ ಸೇವಾ ಕಾರ್ಯಕರ್ತರಾಗಿ ರೂಪುಗೊಂಡರು. ಭಾರತಕ್ಕೆ ಸ್ವಾತಂತ್ರ್ಯ ಬಂದ ನಂತರ ಕೆ.ಸಿ.ರೆಡ್ಡಿ ನೇತೃತ್ವದ ಸರ್ಕಾರ ಅಸ್ತಿತ್ವಕ್ಕೆ ಬಂತು. ಈ ಸರ್ಕಾರದಲ್ಲಿ ಚನ್ನಿಗರಾಮಯ್ಯನವರು ದಲಿತ ಮಂತ್ರಿಯಾಗಿ ನಿಯೋಜನೆಗೊಂಡರು. ಅವರು ವಹಿಸಿಕೊಂಡ ಸ್ಥಳೀಯ ಸಂಸ್ಥೆಗಳ ಇಲಾಖೆ, ಅರಣ್ಯ ಇಲಾಖೆಯನ್ನು ಜವಾಬ್ದಾರಿಯನ್ನೇ ಅತ್ಯಂತ ಶಿಸ್ತುಬದ್ಧವಾಗಿ ನಿರ್ವಹಿಸಿದರು. ಇವರು ತಮ್ಮ ಅಧಿಕಾರಾವಧಿಯಲ್ಲಿ ಬಹಳಷ್ಟು ಉತ್ತಮ ಜನೋಪಯೋಗಿ ಕಾರ್ಯಕ್ರಮಗಳನ್ನು ಕೈಗೊಂಡಿದ್ದರು. ಅರಣ್ಯ ಇಲಾಖೆಗೆ ನವಚೇತನವನ್ನು ತುಂಬಿ ಜನತೆಯ ಪ್ರೀತಿಗೆ ಪಾತ್ರರಾದರು. ಇವರು ಅರಣ್ಯ ಮಂತ್ರಿಗಳಾಗಿದ್ದಾಗ ಕಾಡಿನ ಆನೆಗಳನ್ನು ಹಿಡಿದು ಪಳಗಿಸಿದರೆ ಅವುಗಳಿಂದ ಇಲಾಖೆಗೆ ಪ್ರಯೋಜನವಾದೀತು ಎಂಬ ದೃಷ್ಟಿಯಿಂದ ಆನೆಗಳನ್ನು ಹಿಡಿಯುವುದರ ವಿಚಾರವಾಗಿ ಅಂದಿನ ಮದ್ರಾಸ್ ಸರ್ಕಾರದ ಅರಣ್ಯ ಇಲಾಖೆಯವರೊಂದಿಗೆ ಚರ್ಚೆಮಾಡಿ ಖೆಡ್ಡಾ ಆಪರೇಷನ್ ಮಾಡಬೇಕೆಂದು ತೀರ್ಮಾನಿಸಿದರು. ಚನ್ನಿಗರಾಮಯ್ಯನವರು ಮೊಟ್ಟ ಮೊದಲಿಗೆ ಮೈಸೂರು ರಾಜ್ಯದ ಬಂಡೀಪುರ ಅರಣ್ಯ ಪ್ರದೇಶದಲ್ಲಿ ಖೆಡ್ಡಾ ಆಪರೇಷನ್ ಪ್ರಾರಂಭ ಮಾಡಿಸಿದರು. ಮೈಸೂರು ರಾಜ್ಯದ ಮಹಾರಾಜರಾದ ಶ್ರೀ ಜಯಚಾಮರಾಜೇಂದ್ರ ಒಡೆಯರ್, ಅಂದಿನ ಕೇಂದ್ರ ಸಚಿವರಾಗಿದ್ದ ಬಾಬೂ ಜಗಜೀವನರಾಮ್ ಹಾಗೂ ಇನ್ನಿತರ ಗಣ್ಯ ವ್ಯಕ್ತಿಗಳ ಉಪಸ್ಥಿತಿಯಲ್ಲಿ ಮೊಟ್ಟಮೊದಲಿಗೆ ಖೆಡ್ಡಾ ಅಪರೇಷನ್ ಪ್ರಾರಂಭ ಮಾಡಿಸಿದರು. ಖೆಡ್ಡಾ ಅಪರೇಷನ್ ಎಂದರೆ ಕಾಡಾನೆಗಳನ್ನು ಹಿಡಿಯುವ ಒಂದು ವಿಧಾನ ಈ ವಿಧಾನದಲ್ಲಿ ಹಿಂಡು ಹಿಂಡಾಗಿ ಕಾಡಿನಲ್ಲಿರುವ ಆನೆಗಳನ್ನು ಸುತ್ತುವರಿದು, ಈ ಮೊದಲೇ ಬಿದಿರಿನಿಂದ ರಚಿಸಿದ ದೊಡ್ಡ ವೃತ್ತಾಕಾರದ ಜಾಗಕ್ಕೆ ಖೆಡ್ಡಾ ಎಂದು ಕರೆಯುತ್ತಾರೆ. ಈ ಖೆಡ್ಡಾದೊಳಗೆ ಆನೆಗಳನ್ನು ಓಡಿಸಿ ಬಂಧಿಸುವುದು. ಆನೆಗಳನ್ನು ಓಡಿಸಲು ಬಿದಿರಿನ ಕೋಲನ್ನು ಉಪಯೋಗಿಸುತ್ತಿದ್ದರು. ೨-೩ ಅಡಿ ಉದ್ದದ ಬಿದಿರಿನ ಕೋಲಿನ ಮುಕ್ಕಾಲು ಭಾಗವನ್ನು ಎರಡು ಭಾಗಗಳಾಗಿ ಸೀಳಿ, ಅವುಗಳನ್ನು ಕೈಯಲ್ಲಿ ಹಿಡಿದು ಜೋರಾಗಿ ಆಡಿಸಿದರೆ ಬರುವ ಶಬ್ದ, ಕಾಡಾನೆಗಳಿಗೆ ಭಯವನ್ನು ಉಂಟುಮಾಡುತ್ತಿತ್ತು. ಆಗ ಕಾಡಾನೆಗಳು ಹೆದರಿ ಶಬ್ದ ಬರುವ ದಿಕ್ಕಿಗೆ ವಿರುದ್ಧವಾಗಿ ಓಡಲು ಪ್ರಾರಂಭಿಸುತ್ತವೆ. ಹೀಗೆ ಭಯದಿಂದ ಓಡುತ್ತಿರುವ ಆನೆಗಳನ್ನು ಉಪಾಯದಿಂದ ದಾರಿ ತಪ್ಪಿಸಿ ಖೆಡ್ಡಾದೊಳಕ್ಕೆ ಹೋಗುವಂತೆ ಮಾಡುವುದು. ಎಲ್ಲಾ ಆನೆಗಳನ್ನು ಖೆಡ್ಡಾದೊಳಕ್ಕೆ ಪ್ರವೇಶಿಸಿದ ನಂತರ ಖೆಡ್ಡಾದ ಬಾಗಿಲನ್ನು ಮುಚ್ಚಿಸುವುದು. ಆ ನಂತರ ಒಂದೊಂದೇ ಆನೆಗಳನ್ನು ಬೇರೆ ಮಾಡಿ ಅವುಗಳನ್ನು ಹಂತ ಹಂತವಾಗಿ ಪಳಗಿಸಿ ಮನುಷ್ಯರ ಉಪಯೋಗಕ್ಕೆ ಬರುವಂತೆ ಮಾಡಲಾಗುವುದು. ಇದರಿಂದಾಗಿ ಹೆಚ್ಚಿನ ಸಮಯ ಉಳಿತಾಯವಾಗುತ್ತದೆ. ಹೆಚ್ಚಿನ ಕೆಲಸವಾಗುತ್ತದೆ ಎಂದು ಇಲಾಖೆಯ ಅಭಿವೃದ್ಧಿಗೆ ಶ್ರಮಿಸಿದರು.[೬] ೧೯೫೦ ಅಕ್ಟೋಬರ್ ೨೭ರಂದು ಅರಣ್ಯ ಸಂಪತ್ತು ಮತ್ತು ಅದರ ಮಹತ್ವ ಎಂಬ ವಿಷಯದ ಬಗ್ಗೆ

ಜನತೆಯಲ್ಲಿ ತಿಳುವಳಿಕೆ ಮೂಡಿಸಲು ಅರಣ್ಯದ ಪ್ರಯೋಜನಗಳು ಅದರ ಉಪಯುಕ್ತತೆಯ ಬಗ್ಗೆ ಹೆಚ್ಚಿನ ಮಾಹಿತಿಯನ್ನು ಜನತೆಗೆ ತಿಳಿಸುವ ನಿಟ್ಟಿನಲ್ಲಿ ಒಂದು ರೇಡಿಯೋ ಕಾರ್ಯಕ್ರಮವನ್ನು ಏರ್ಪಡಿಸಿ ಉದ್ಘಾಟಿಸಿದರು. ೧೯೪೯ ಆಗಸ್ಟ್ ತಿಂಗಳಲ್ಲಿ ಜಕ್ಕೂರು, ಕೋರಮಂಗಲ, ಗೊಲ್ಲಹಳ್ಳಿ ಮುಂತಾದ ಕಡೆಗಳಲ್ಲಿ ಇರುವ ಫಾರೆಸ್ಟ್ ಪ್ಲಾಂಟೇಷನ್‌ಗಳಿಗೆ ಭೇಟಿ ನೀಡಿ ಪರಿಶೀಲಿಸಿದರು. ಹಲವಾರು ಕಡೆಗಳಲ್ಲಿ ಉದ್ಯಾನವನಗಳನ್ನು ನಿರ್ಮಿಸಿದರು. ಕುಮಾರ ಪಾರ್ಕ್, ಗಾಂಧಿನಗರ ಶಾಲೆಯ ಬಳಿ, ನೆಹರು ನಗರ ಸರ್ಕಲ್ ಪಾರ್ಕ್, ಸುಬ್ರಹ್ಮಣ್ಯ ದೇವಸ್ಥಾನದ ಬಳಿ ಹೀಗೆ ಹಲವಾರು ಕಡೆಗಳಲ್ಲಿ ಸಾರ್ವಜನಿಕರಿಗೆ ಅನುಕೂಲವಾಗುವಂತೆ ಉದ್ಯಾನವನಗಳನ್ನು ನಿರ್ಮಿಸಿದರು. ಬೆಂಗಳೂರಿನ ಗೊರಗುಂಟೆ ಪಾಳ್ಯ ಆಗ ಅರಣ್ಯ ಇಲಾಖೆಗೆ ಸೇರಿತ್ತು. ಚನ್ನಿಗರಾಮಯ್ಯನವರು ಅರಣ್ಯ ಮಂತ್ರಿಗಳಾಗಿದ್ದಾಗ ಜಮೀನು ಇಲ್ಲದ ದಲಿತರಿಗೆ ಸರ್ಕಾರದವತಿಯಿಂದ ಈ ಭಾಗದ ಜಮೀನನ್ನು ಕೊಡಿಸಿದ್ದರು. ದುಸ್ತರದ ದಿನಗಳಲ್ಲಿ ಕಂಠೀರವ ಸ್ಟುಡಿಯೋ ಸ್ಥಾಪನೆಯಾಗಲು ಇವರ ಕೊಡುಗೆಯು ತುಂಬಾ ಇರುವುದನ್ನು ಗಮನಿಸಬಹುದು. ಅರಣ್ಯ ಸಂಪತ್ತಿನ ಮಹತ್ವವನ್ನು ತಿಳಿದಿದ್ದ ಚನ್ನಿಗರಾಮಯ್ಯನವರು ಅದರ ರಕ್ಷಣೆಗೆ, ಅದರ ಅಭಿವೃದ್ಧಿಗೆ ಶ್ರಮಿಸಿದರು.

ಅರಣ್ಯ ಇಲಾಖೆಯಲ್ಲಿ ನಡೆಯುತ್ತಿದ್ದ ಕಳ್ಳಸಾಗಾಣಿಕೆಯನ್ನು ತಡೆಗಟ್ಟಲು ಅರಣ್ಯ ಕಾಯ್ದೆಯನ್ನು ಜಾರಿ ಮಾಡಿದರು. ಇದರಿಂದ ಅಧಿಕಾರಿಗಳು ಸೂಕ್ತ ರೀತಿಯಲ್ಲಿ ಅರಣ್ಯ ಸಂಪತ್ತನ್ನು ರಕ್ಷಿಸಲು ಸಾಧ್ಯವಾಯಿತು. ೧೯೪೯ ನವೆಂಬರ್‌ನಲ್ಲಿ ಕಾಕನಕೋಟೆಗೆ ಭೇಟಿ ನೀಡಿ ಖೆಡ್ಡಾ ಕಾರ್ಯಾಚರಣೆಗೆ ಸಂಬಂಧಿಸಿದಂತೆ ಮಾಡಬೇಕಾದ ವ್ಯವಸ್ಥೆಯ ಬಗ್ಗೆ ಸೂಚನೆಗಳನ್ನು ನೀಡಿದರು. ಅರಣ್ಯ ಇಲಾಖೆಯ ಅಧಿಕಾರಿಗಳಿಗೆ ಹೆಚ್ಚಿನ ಅಧಿಕಾರ ಕೊಟ್ಟು ೫೦೦ ರೂಪಾಯಿ ದಂಡ ವಿಧಿಸುವುದಕ್ಕೆ ಅಧಿಕಾರ ಕೊಟ್ಟರು. ಅರಣ್ಯ ಇಲಾಖೆಯಲ್ಲಿರುವ ಬಹಳ ಅಧಿಕಾರಿಗಳು ಅನೇಕ ಕಡೆಗಳಲ್ಲಿ ಕಳ್ಳ ಸಾಗಾಣಿಕೆ ಮಾಡುವುದಕ್ಕೆ ಉತ್ತೇಜನ ಕೊಡುತ್ತಿದ್ದರು. ಅಂತಹವರ ವಿರುದ್ಧ ಕಠಿಣ ಕ್ರಮಗಳನ್ನು ಕೈಗೊಂಡರು. ಯಾವುದೇ ರೀತಿಯಲ್ಲಿ ಮರಗಳನ್ನು ಕಡಿಯುವುದಕ್ಕೆ ಅಂದರೆ ಸೌದೆಗಾಗಿ ಆಗಿರಬಹುದು ಮನೆಕಟ್ಟಿಕೊಳ್ಳಲು ಮತ್ಯಾವುದೇ ಕೆಲಸ ಕಾರ್ಯಗಳಿಗೂ ಸಹ ಮರಗಳನ್ನು ಕಡಿಯಬೇಕಾದರೆ ಅನುಮತಿ ಪಡೆಯುವುದು ಅಗತ್ಯ, ಇಲ್ಲವಾದರೆ ಕೇಸುಗಳನ್ನು ದಾಖಲಿಸಲು ಸೂಚಿಸಿದರು. ಕಳ್ಳಸಾಗಾಣಿಕೆಯನ್ನು ತಡೆಯುವ ದೃಷ್ಟಿಯಿಂದ ಅನೇಕ ಕಡೆಗಳಲ್ಲಿ ಚೆಕ್‌ಪೋಸ್ಟ್‌ಗಳನ್ನು ತೆರೆದರು. ಇದರಿಂದಾಗಿ ಕಳ್ಳಸಾಗಾಣಿಕೆಯು ಸ್ವಲ್ಪ ಕಡಿಮೆ ಮಾಡಲು ಸಹಕಾರಿಯಾಯಿತು. ಅರಣ್ಯ ಸಂಪತ್ತಿನ ಅಭಿವೃದ್ಧಿ ವಿಚಾರದಲ್ಲಿ ಸರ್ಕಾರ ಆಸಕ್ತಿಯನ್ನು ಹೊಂದಿತ್ತು. ಯಾವ ದೇಶದಲ್ಲಿಯೇ ಆಗಲೀ ಅರಣ್ಯ ಸಂಪತ್ತಿದ್ದರೆ ನಾನಾ ವಿಧದಲ್ಲಿ ಅನುಕೂಲಗಳು ದೊರಕುತ್ತವೆಂದೂ ಮತ್ತು ಅಂಥಾ ಪ್ರದೇಶದಲ್ಲಿ ಮಳೆಬೆಳೆಗಳೂ ಕೂಡ ಸಮೃದ್ಧಿಯಾಗಿ ಆಗುತ್ತವೆಂದು ತಿಳಿದಿದ್ದರು. ನಮ್ಮ ದೇಶದಲ್ಲಿರುವ ಅರಣ್ಯ ಸಂಪತ್ತು ಇಡೀ ದೇಶಕ್ಕೆ ಎಷ್ಟಿರಬೇಕೋ ಅಷ್ಟಿಲ್ಲ. ಕಮ್ಮಿಯಾಗಿದೆ. ಆದರೆ ಈಗ ಇರತಕ್ಕ ಅರಣ್ಯವನ್ನು ಅಭಿವೃದ್ಧಿಪಡಿಸುವುದರಲ್ಲಿ ಯಾವ ಅನುಮಾನವೂ ಇಲ್ಲ. ನಮ್ಮ ದೇಶದಲ್ಲಿರತಕ್ಕ ಅರಣ್ಯಗಳಿಂದ

ಎಷ್ಟರಮಟ್ಟಿಗೆ ಸೌದೆ ಮತ್ತು ಇತರ ಮರಮುಟ್ಟುಗಳು ಯಾವ ರೀತಿಯಲ್ಲಿ ಖರ್ಚಾಗುತ್ತಿವೆಯೆಂಬುದನ್ನು ಸ್ವಲ್ಪ ಆಲೋಚನೆ ಮಾಡಿ ನೋಡಬೇಕಾಗಿದೆ. ಕಳೆದ ವರ್ಷ ಸೌದೆ ಮತ್ತು ಇದ್ದಲಿನ ಅಭಾವಕ್ಕಾಗಿ ಕಾಡನ್ನು ಕಡಿಯಬೇಕಾಗಿ ಬಂತು. ಆದರೆ ಇನ್ನು ಮುಂದೆ ಹಾಗೆ ಮಾಡದ ರೀತಿಯಲ್ಲಿ ಅರಣ್ಯ ಸಂಪತ್ತನ್ನು ಅಭಿವೃದ್ಧಿ ಪಡಿಸಲು ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಂಡಿರುವುದಾಗಿ ಮತ್ತು ಜನತೆಯಲ್ಲಿ ಅರಣ್ಯ ಸಂಪತ್ತಿನ ರಕ್ಷಣೆಯಿಂದಾಗುವ ಅನುಕೂಲಗಳನ್ನು ತಿಳಿಸುವ ದೃಷ್ಟಿಯಿಂದ ಅರಣ್ಯ ಇಲಾಖೆಯ ಅಭಿವೃದ್ಧಿಗೋಸ್ಕರ ಶ್ರಮಿಸಿದರು. ಸಸಿ ನೆಡುವ ಕಾರ್ಯಕ್ರಮಗಳನ್ನು ನಡೆಸುತ್ತಿದ್ದರು.

ಅದೇ ರೀತಿಯಲ್ಲಿ ಸ್ಥಳೀಯ ಸಂಸ್ಥೆಗಳನ್ನು ಅಭಿವೃದ್ಧಿಪಡಿಸಲು ಸೂಕ್ತ ಕ್ರಮಗಳನ್ನು ಕೈಗೊಂಡಿದ್ದರು. ಹಲವಾರು ಪುರಸಭೆಗಳನ್ನು ಮೇಲ್ದರ್ಜೆಗೆ ಏರಿಸಿದರು. ಸ್ಥಳೀಯ ಸಂಸ್ಥೆಗಳಿಗೆ ಹೆಚ್ಚು ಹೆಚ್ಚು ಹಣವನ್ನು ನೀಡುವುದರ ಮುಖಾಂತರ ಅಭಿವೃದ್ಧಿ ಕಾರ್ಯಗಳನ್ನು ಕೈಗೊಳ್ಳಲು ಸೂಚಿಸುತ್ತಿದ್ದರು. ಸ್ಥಳೀಯ ಸಂಸ್ಥೆಗಳ ಸಚಿವರಾಗಿದ್ದ ಅವಧಿಯಲ್ಲಿ ಹಲವಾರು ಜಿಲ್ಲೆಗಳಿಗೆ ಪ್ರವಾಸ ಕೈಗೊಂಡರು. ಇವರು ೧೯೫೦ ಜೂನ್ ೨೨ರಂದು ಮದ್ರಾಸ್‌ಗೆ ಭೇಟಿ ನೀಡಿದರು. ಮದ್ರಾಸ್ ಕಾರ್ಪೊರೇಷನ್ ಕಾಯ್ದೆ ಮತ್ತು ಅಲ್ಲಿರುವ ಸ್ಥಳೀಯ ಸಂಸ್ಥೆಗಳ ಸಮೀಕ್ಷೆ, ಅವುಗಳ ಕಾರ್ಯ ಯೋಜನೆ ಹಾಗೂ ಪರಿಮಿತಿಗಳನ್ನು ಕುರಿತು ಅಧ್ಯಯನ ಕೈಗೊಂಡರು. ಅದೇ ವರ್ಷ ಡಿಸೆಂಬರ್ ತಿಂಗಳಲ್ಲಿ ದೆಹಲಿಯಲ್ಲಿ ನಡೆದ ಭಾರತದ ಎಲ್ಲಾ ಸ್ಥಳೀಯ ಸಂಸ್ಥೆಗಳ ಮಂಡಳಿಗಳ ಕಾನ್ಫರೆನ್ಸ್‌ನಲ್ಲಿ ಭಾಗವಹಿಸಿದರು. ಇದರಿಂದಾಗಿ ಅಲ್ಲಿನ ಸ್ಥಳೀಯ ಸಂಸ್ಥೆಗಳ ಕಾರ್ಯ ವೈಖರಿಯನ್ನು ಅಧ್ಯಯನ ಮಾಡಿ. ಅಭಿವೃದ್ಧಿ ಯೋಜನೆಗಳನ್ನು ಸಮೀಕ್ಷೆ ಮಾಡಿ ಅವುಗಳ ಕಾಯ್ದೆ, ಯೋಜನೆಗಳನ್ನು ನಮ್ಮ ಸ್ಥಳೀಯ ಸಂಸ್ಥೆಗಳಲ್ಲಿ ಅಳವಡಿಸಿಕೊಳ್ಳಲು ಚಿಂತನೆ ನಡೆಸಿದರು. ಸ್ಥಳೀಯ ಸಂಸ್ಥೆಗಳು ಚುರುಕಾಗಿ ಕಾರ್ಯ ನಿರ್ವಹಿಸಲು ಅಗತ್ಯವಾದ ಕ್ರಮಗಳನ್ನು ಕೈಗೊಂಡರು. ೧೯೪೯ ಸೆಪ್ಟೆಂಬರ್ ೬ರಂದು ಅವರು ನೆಲಮಂಗಲ ಮತ್ತು ಮಾಗಡಿ ಪುರಸಭೆಗೆ ಅನಿರೀಕ್ಷಿತ ಭೇಟಿ ನೀಡಿ ಪರಿಶೀಲಿಸಿದರು. ಕೆಲವೊಂದು ಸಲಹೆ ಸೂಚನೆಗಳನ್ನು ನೀಡಿ ಉತ್ತಮ ರೀತಿಯಲ್ಲಿ ಕಾರ್ಯ ನಿರ್ವಹಿಸುವಂತೆ ತಿಳಿಸಿದರು. ಕೊರಟಗೆರೆ ಪುರಸಭೆಗೆ ಭೇಟಿ ನೀಡಿ ತಪಸಾಣೆ ಕೈಗೊಂಡು ಈ ಪುರಸಭೆಯನ್ನು ಮೇಲ್ದರ್ಜೆಗೆ ಏರಿಸಿದರು. ೧೯೫೦ ಮಾರ್ಚ್‌ನಲ್ಲಿ ಪ್ರವಾಸ ಕೈಗೊಂಡು ಹಾಸನ, ಬೇಲೂರು, ಹಳೆಬೀಡು, ಅರಸೀಕೆರೆಗಳಲ್ಲಿ ನೀರು ಪೂರೈಕೆ ಕೇಂದ್ರವನ್ನು ಪರೀಕ್ಷಿಸಿದರು. ೧೯೪೯ ಡಿಸೆಂಬರ್‌ನಲ್ಲಿ ಕರ್ನಾಟಕಕಾದ್ಯಂತ ಪ್ರವಾಸ ಮಾಡಿ ಕೇಂದ್ರ ಕಾರ್ಮಿಕ ಸಚಿವ ಬಾಬು ಜಗಜೀವನ್‌ರಾವ್ ಅವರೊಂದಿಗೆ ಮೈಸೂರಿನಲ್ಲಿ ನಡೆದ ಲೇಬಲ್ ಕಾನ್ಫರೆನ್ಸ್‌ನಲ್ಲಿ ಭಾಗವಹಿಸಿದರು. ಚನ್ನಿಗರಾಮಯ್ಯನವರು ಅನೇಕ ಜಿಲ್ಲೆಗಳ ಪುರಸಭೆಗಳಿಗೆ ಅನಿರೀಕ್ಷಿತವಾಗಿ ಭೇಟಿ ನೀಡುತ್ತಿದ್ದರು. ಸ್ಥಳೀಯ ಸಂಸ್ಥೆಗಳ ಮೂಲಕ ಅಭಿವೃದ್ಧಿ ಕಾರ್ಯಗಳನ್ನು ಕೈಗೊಳ್ಳಲು ಸೂಕ್ತವಾದ ಅನುದಾನವನ್ನು ನೀಡುತ್ತಿದ್ದರು. ದಕ್ಷತೆಯಿಂದ ಕಾರ್ಯ ನಿರ್ವಹಿಸುವಂತೆ ಸೂಚಿಸುತ್ತಿದ್ದರು. ಪ್ರತಿಯೊಬ್ಬರಿಗೂ ಸರ್ಕಾರದ ಸೌಲಭ್ಯಗಳನ್ನು ದೊರೆಯುವಂತೆ ಮಾಡಲು ಹೆಚ್ಚಿನ ಕಾಳಜಿ ವಹಿಸಿದ್ದರು. ಸ್ಥಳೀಯ ಸರ್ಕಾರಗಳ ಆಡಳಿತದಲ್ಲಿ ಇರತಕ್ಕ ನ್ಯೂನತೆಗಳನ್ನು ಸರಿಪಡಿಸಲು ಹಲವಾರು ಅಧಿಕಾರಿಗಳ ಜೊತೆ ಚರ್ಚಿಸಿ ಸಂಬಂಧಪಟ್ಟ ಇಲಾಖೆಗಳಲ್ಲಿ ಸಮಸ್ಯೆಗಳನ್ನು ಬಗೆಹರಿಸಲು ಪ್ರಯತ್ನಿಸುತ್ತಿದ್ದರು.

ಆರ್.ಚನ್ನಿಗರಾಮಯ್ಯನವರು ಮಂತ್ರಿಯಾಗಿದ್ದಾಗ ಚಿತ್ರದುರ್ಗದಲ್ಲಿ ನಡೆದ ಜಿಲ್ಲಾ ಬೋರ್ಡುಗಳ ಸಮ್ಮೇಳನವನ್ನು ಉದ್ದೇಶಿಸಿ ಭಾಷಣ ಮಾಡಿದ್ದರು. ಅದರ ಸಾರಾಂಶ ಈ ರೀತಿ ಇದೆ.

ಜಿಲ್ಲಾ ಬೋರ್ಡುಗಳ ಮಾನ್ಯ ಅಧ್ಯಕ್ಷರೇ 'ಹಾಗೂ ಸದಸ್ಯರೆ' ನನ್ನನ್ನು ಈ ಮಹಾಸಮ್ಮೇಳನಕ್ಕೆ, ಬರಮಾಡಿಕೊಂಡು ಇದರ ಅಧ್ಯಕ್ಷತೆಯನ್ನು ವಹಿಸಲು ಅವಕಾಶ ಕಲ್ಪಿಸಿಕೊಟ್ಟುದ್ದಕ್ಕಾಗಿ ನಾನು ಈ ಸಮ್ಮೇಳನದ ವ್ಯವಸ್ಥಾಪಕರಿಗೂ ಮತ್ತು ತಮ್ಮೆಲ್ಲರಿಗೂ ವಂದನೆಯನ್ನು ಸಮರ್ಪಿಸುತ್ತೇನೆ. ಈ ಜಿಲ್ಲಾ ಬೋರ್ಡುಗಳು ಒಂದಿಲ್ಲೊಂದು ರೂಪದಲ್ಲಿ ಸುಮಾರು ೮೦ ವರ್ಷಗಳಿಂದ ನಮ್ಮ ಸಂಸ್ಥಾನದಲ್ಲಿ ನಡೆದು ಬರುತ್ತಿವೆ. ಆದರೂ ಇಂಥ ಮಹಾ ಸಮ್ಮೇಳನವು ನಡೆದಿರುವುದು ಇದೇ ಮೊದಲು ಎಂದು ನನಗೆ ತಿಳಿದು ಬಂದಿದೆ. ಇಂಥ ಸಮ್ಮೇಳನಗಳಿಂದ ಸರ್ಕಾರಕ್ಕೂ ಮತ್ತು ಪ್ರಜಾ ಸೇವೆಯಲ್ಲಿ ನಿರತವಾಗಿರುವ ಸ್ಥಳೀಯ ಸಂಸ್ಥೆಗಳಿಗೂ ನಿಕಟ ಸಂಬಂಧವುಂಟಾಗಿ ಸರ್ಕಾರದವರ ಕಷ್ಟಗಳನ್ನು ತಾವುಗಳು ಮತ್ತು ತಮ್ಮ ಕಷ್ಟ ಸುಖಗಳನ್ನು ಕುಂದುಕೊರತೆಗಳನ್ನು ಸರ್ಕಾರದವರು ಚೆನ್ನಾಗಿ ಮನದಟ್ಟು ಮಾಡಿಕೊಂಡು ಇಬ್ಬರೂ ಒಟ್ಟಿನಲ್ಲಿ ನಮ್ಮ ದೇಶದ ಪ್ರಜೆಗಳ ಸೇವೆಯನ್ನು ಇನ್ನೂ ಹೆಚ್ಚು ಹೆಚ್ಚಾಗಿ ಮಾಡಲು ಅವಕಾಶವುಂಟಾಗುತ್ತದೆಂಬ ಅಂಶವನ್ನು ನಾನು ಒತ್ತಿ ಹೇಳಬೇಕಾಗಿಲ್ಲ. ಇಂಥ ಸದವಕಾಶವನ್ನು ಕಲ್ಪಿಸಿಕೊಡಲು ಚಿತ್ರದುರ್ಗ ಜಿಲ್ಲಾ ಬೋರ್ಡಿನ ಅಧ್ಯಕ್ಷರೂ ಮತ್ತು ಸದಸ್ಯರು ಸಹ ಶ್ರಮಿಸಿರುವುದು ಬಹಳ ಶ್ಲಾಘನೀಯವಾಗಿದೆ.[೧೦] ನಾವು ಈ ಸಮ್ಮೇಳನವನ್ನು ನಡೆಸುತ್ತಿರುವ ಕಾಲದಲ್ಲಿ ನಮ್ಮ ದೇಶದಲ್ಲಿ ಈಗಿರತಕ್ಕ ರಾಜಕೀಯ ಸನ್ನಿವೇಶಗಳನ್ನು ಮತ್ತು ಇತ್ತೀಚೆಗೆ ನಡೆದಿರುವ ಮುಖ್ಯ ಘಟನೆಗಳನ್ನು ನಮ್ಮ ಸ್ಮೃತಿಪಥಕ್ಕೆ ತಂದುಕೊಳ್ಳದೆ ಬಿಡುವಂತಿಲ್ಲ. ಭಾರತ ದೇಶಕ್ಕೆ ಈಗ ಸ್ವಾತಂತ್ರ್ಯವೂ ಲಭಿಸಿದೆ. ಸಾವಿರಾರು ಮೈಲಿಗಳಿಂದ ಇಲ್ಲಿಗೆ ಬಂದು ನಮ್ಮನ್ನು ದಾಸ್ಯದಲ್ಲಿಟ್ಟ ಸಾಮ್ರಾಜ್ಯ ಮನೋಭಾವದಲ್ಲಿದ್ದ ಬ್ರಿಟಿಷರ ಆಳ್ವಿಕೆಯು ಕೊನೆಗೊಂಡಿದೆ. ಆಳುವವರು ಬೇರೆ ಮತ್ತು ಆಳಲ್ಪಡುವವರೇ ಬೇರೆ ಎಂಬ ಮನೋಭಾವನೆಯೂ ತೊಲಗಿ ಹೋಗಿದೆ. ಪ್ರಜೆಗಳಿಗಾಗಿ ಪ್ರಜೆಗಳಿಂದಲೇ ನಡೆಯುವ ಸರ್ಕಾರಗಳು ಸ್ಥಾಪನೆಯಾಗುತ್ತಿವೆ. ಇಂಡಿಯಾ ದೇಶದ ರಾಜ ಮಹಾರಾಜರು ಸಹ ಪ್ರಜಾಪ್ರಭುತ್ವ ಸರ್ಕಾರಕ್ಕೆ ಮನ್ನಣೆ ಕೊಟ್ಟು ತಮ್ಮ ನಿರಂಕುಶಾಧಿಕಾರ ಮನೋಭಾವವನ್ನು ಬಿಟ್ಟು ಪ್ರಜೆಗಳಲ್ಲಿ ಬೆರೆಯುತ್ತಿದ್ದಾರೆ.

ಅನೇಕ ಸಣ್ಣಪುಟ್ಟ ಸಂಸ್ಥಾನಗಳೂ ಸಹ ಒಕ್ಕೂಟಗಳಲ್ಲಿ ಸೇರಿ ಪ್ರಜೆಗಳ ಹಿತಸಾಧನೆಯಾಗುವಂತೆಯೂ ಒಟ್ಟಿನಲ್ಲಿ ನಮ್ಮ ದೇಶವು ಏಳಿಗೆ ಹೊಂದಿ ಪ್ರಪಂಚದಲ್ಲಿ ಅಗ್ರ ಸ್ಥಾನವನ್ನು ಹೊಂದಲು ಸಹಾಯವಾಗುವಂತೆಯೂ ವರ್ತಿಸುತ್ತಿದೆ. ಇವೆಲ್ಲಕ್ಕೂ ಕಾರಣವಾಗಿ ನಮ್ಮ ದೇಶದ ಸ್ವಾತಂತ್ರ್ಯಕ್ಕೆ ಜೀವನಾಡಿಯಂತಿದ್ದ ಕೀರ್ತಿಶೇಷರಾದ ಮಹಾತ್ಮ ಗಾಂಧೀಜಿಯವರನ್ನು ಈ ಸಂದರ್ಭದಲ್ಲಿ ನಾವು ಕೃತಜ್ಞತಾ ಪೂರ್ವಕವಾಗಿ ಜ್ಞಾಪಿಸಿಕೊಳ್ಳುವುದು ನಮ್ಮ ಕರ್ತವ್ಯವಾಗಿದೆ. ಹೊರಗಿನ ಸನ್ನಿವೇಶಕ್ಕೆ ಹೊಂದಿಕೊಂಡು ನಿಮ್ಮ ಮೈಸೂರು ಸಂಸ್ಥಾನದಲ್ಲಿಯೂ ಸಹ ಪ್ರಜಾಸೇವೆಯನ್ನು ಮಾಡಬೇಕು, ದೀನ ದಲಿತರ ಉದ್ಧಾರವಾಗಬೇಕು ದೇಶದ ಸಂಪತ್ತು ಹೆಚ್ಚಾಗಬೇಕು ಎಂಬ ಮನೋಭಾವವುಳ್ಳ ಪ್ರಜಾಸರ್ಕಾರವು ಸ್ಥಾಪಿತವಾಗಿರುವುದು

ತಮ್ಮೆಲ್ಲರಿಗೂ ತಿಳಿದ ಅಂಶವೇ ಆಗಿದೆ. ಅಲ್ಲದೆ ನಮ್ಮ ದೇಶದಲ್ಲಿ ಪ್ರಜಾಸರ್ಕಾರ ತತ್ವಕ್ಕೆ ಅನುಸಾರವಾದ ರಾಜ್ಯಾಂಗವನ್ನು ರಚನೆ ಮಾಡಲು ರಾಜ್ಯಾಂಗ ರಚನಾ ಸಭೆಯು ಸ್ಥಾಪಿತವಾಗಿ ಅದು ಕೆಲಸ ಮಾಡುತ್ತಿರುವುದು ತಮ್ಮೆಲ್ಲರಿಗೂ ಗೊತ್ತಿರುವ ವಿಷಯವೇ ಆಗಿದೆ. ನಮ್ಮ ಸಂಸ್ಥಾನದ ಆಡಳಿತವು ಹೇಗಿರಬೇಕು? ಪ್ರಜೆಗಳ ಹಕ್ಕು ಬಾಧ್ಯತೆಗಳೇನು ಮತ್ತು ಕರ್ತವ್ಯಗಳೇನು? ಪ್ರಜಾ ಸೇವೆಯಲ್ಲಿಯೇ ನಿರತವಾಗಿರುವ ಸ್ಥಳೀಯ ಸಂಸ್ಥೆಗಳು ಎಂದರೆ ಗ್ರಾಮ ಪಂಚಾಯಿತಿಗಳ, ಮುನಿಸಿಪಾಲಿಟಿಗಳ ಮತ್ತು ಜಿಲ್ಲಾ ಬೋರ್ಡುಗಳು ಇವುಗಳ ರಚನೆಯು ಹೇಗಿರಬೇಕು? ಅವುಗಳ ಹೊಂದಾಣಿಕೆಯು ರಾಜ್ಯಾಂಗದಲ್ಲಿ ಹೇಗಿರಬೇಕು? ಅವುಗಳ ಹಕ್ಕು ಬಾಧ್ಯತೆಗಳು ಏನು? ಅವುಗಳ ಆರ್ಥಿಕ ಸ್ಥಿತಿಗತಿಗಳ ವಿಷಯದಲ್ಲಿ ಯಾವ ಜೋಡಣೆಯಿರಬೇಕು? ಇತ್ಯಾದಿ ಎಲ್ಲ ಅಂಶಗಳು ರಾಜ್ಯಾಂಗ ರಚನಾ ಸಭೆಯಲ್ಲಿ ವಿಶದವಾಗಿ ಚರ್ಚಿಸಲ್ಪಟ್ಟು ತೀರ್ಮಾನವಾಗುತ್ತವೆಂದು ನಾನು ನಂಬಿದ್ದೇನೆ.[೧೧] ಈ ಸಂದರ್ಭದಲ್ಲಿ ಸ್ಥಳೀಯ ಸಂಸ್ಥೆಗಳು ವಿಶೇಷತಃ ಜಿಲ್ಲಾ ಬೋರ್ಡುಗಳ ರಚನೆ ಮತ್ತು ಬೆಳವಣಿಗೆಯನ್ನು ಸ್ವಲ್ಪಮಟ್ಟಿಗೆ ಪ್ರಸ್ತಾಪ ಮಾಡಲು ತಮ್ಮ ಅನುಮತಿಯನ್ನು ಕೋರುತ್ತೇನೆ. ೧೮೬೦ರಲ್ಲಿ ಮೈಸೂರಿನ ಚೀಪ್ ಕಮೀಷನ್ ಅವರು ಗ್ರಾಮಗಳಲ್ಲಿ ೨ ಆಣೆಯಿಂದ ೬ ಆಣೆಗೆ ನೇಗಿಲ ತೆರಿಗೆಯನ್ನು ವಿಧಾಯಕ ಮಾಡಿ ಇದರಿಂದ ಬಂದ ಉತ್ಪತ್ತಿಯನ್ನು ಸ್ಥಳೀಯ ರಸ್ತೆಗಳ ಅಭಿವೃದ್ಧಿಗೆ ಉಪಯೋಗಿಸಬೇಕೆಂದು ಅಪ್ಪಣೆ ಮಾಡಿದರು ಆಗಿನಿಂದ ಜಿಲ್ಲಾ ಬೋರ್ಡುಗಳು ಶೈಶವಾವಸ್ಥೆಯಲ್ಲಿ ಪ್ರಾರಂಭವಾದುವೆಂದು ಹೇಳಬಹುದಾಗಿದೆ. ಅನಂತರ ೧೮೬೫-೬೬ರಲ್ಲಿ ಈ ನೇಗಿಲ ತೆರಿಗೆಗೆ ಬದಲಾಗಿ ಜಮೀನಿನ ಕಂದಾಯದ ಮೇಲೆ ರೂಪಾಯಿಗೆ ಒಂದು ಆಣೆಯಂತೆ ಲೋಕಲ್‌ಸೆಸ್ ವಿಧಾಯಕವಾಯಿತು.

೧೮೭೨ರಲ್ಲಿ ಇದೇ ರೀತಿಯಾದ ಸೆಸ್ಸನ್ನು ಅಬ್ಕಾರಿ ಮತ್ತು ಅರಣ್ಯ ಶಾಖೆಯ ಬಾಬ್ತುಗಳ ಮಾಡಿ ವಿಧಿಸಿರುವುದು ಅಲ್ಲದೆ, ಅದರ ಉತ್ಪತ್ತಿಯನ್ನು ವಿದ್ಯಾಭ್ಯಾಸ, ರಸ್ತೆ, ವೈದ್ಯಕೀಯ ಮತ್ತು ಪ್ರಯಾಣಿಕರ ಬಂಗಲೆಗಳ ಖರ್ಚಿಗಾಗಿ ನಿಗದಿ ಮಾಡಲಾಯಿತು. ೧೮೭೪ರಲ್ಲಿ ಡಿಸ್ಟ್ರಿಕ್ಟ್ ಅಧಿಕಾರಿಗಳೊಂದಿಗೆ ಆರಿಸಲ್ಪಟ್ಟ ಖಾಸಗಿ ಮಹನೀಯರಿಂದ ಕೂಡಿದ ಜಿಲ್ಲಾ ಸಮಿತಿಗಳು ಸ್ಥಾಪಿತವಾದವು. ೧೯೦೨ರಲ್ಲಿ ಪ್ರಜಾಬೆಂಬಲವನ್ನು ಹೊಂದಿರುವ ಮಹನೀಯರಿಗೆ ಉತ್ತೇಜನ ಕೊಡಲು ನಿಗದಿಯಾದಂತೆ ಪ್ರತಿಯೊಂದು ತಾಲ್ಲೂಕಿನಿಂದಲೂ ಚುನಾಯಿತ ಸದಸ್ಯರನ್ನು ನೇಮಿಸಲು ಕಾನೂನಾಯಿತು. ಅಲ್ಲದೆ, ಆ ಬೋರ್ಡಿಗೆ ಹೆಚ್ಚು ಅಧಿಕಾರವನ್ನು ನೀಡಲಾಯಿತು. ಇದರ ಪ್ರಕಾರ ಪ್ರತಿಯೊಂದು ತಾಲ್ಲೂಕಿಗೂ ಒಂದೊಂದು ತಾಲ್ಲೂಕು ಬೋರ್ಡು ಮತ್ತು ಆರಿಸಲ್ಪಟ್ಟ ಗ್ರಾಮಗಳಿಗೆ ಮಾತ್ರ ಪಂಚಾಯಿತಿ ಯೂನಿಯನ್ ಇರಬೇಕೆಂದೂ ವಿಧಾಯಕವಾಯಿತು. ಆದರೆ, ಮೇಲೆ ಕಂಡ ಕಾನೂನಿನಂತೆ ಜಿಲ್ಲಾ ಸರ್ಕಾರಿ ಅಧಿಕಾರಿಗಳ ಪ್ರಭಾವವೇ ಹೆಚ್ಚಾಗಿದ್ದಿತು. ಆದರೆ, ೧೯೧೮ರಲ್ಲಿ ಚುನಾಯಿತ ಸದಸ್ಯರ ಸಂಖ್ಯೆಯನ್ನು ಹೆಚ್ಚು ಮಾಡಲಾಯಿತು ಮತ್ತು ಆ ಬೋರ್ಡುಗಳು ಖಾಸಗಿ ಅಧ್ಯಕ್ಷ ಮತ್ತು ಉಪಾಧ್ಯಕ್ಷರನ್ನೇ ಆರಿಸಿಕೊಳ್ಳುವ ಹಕ್ಕನ್ನು ಕೊಡಲು ಅವಕಾಶ ಕಲ್ಪಿಸಲಾಯಿತು. ತಾಲ್ಲೂಕು ಬೋರ್ಡುಗಳು ತಮ್ಮ ತಾಲ್ಲೂಕಿನ ಕೆಲಸ ಕಾರ್ಯಗಳನ್ನು ನಡೆಸಿಕೊಂಡು ಬರಲು ಸಾಕಾದಷ್ಟು ಹಣ ಸೌಕರ್ಯ ಮತ್ತು ಉತ್ಪತ್ತಿಯಿಲ್ಲವೆಂಬ ಅಭಿಪ್ರಾಯದ ಮೇಲೆ ತಾಲ್ಲೂಕು ಬೋರ್ಡುಗಳನ್ನು ೧೯೨೭ರಲ್ಲಿ

ವಜಾ ಮಾಡಲಾಯಿತು ಮತ್ತು ಹೆಚ್ಚಿನ ಅಧಿಕಾರಿಗಳೊಡನೆ ಗ್ರಾಮ ಪಂಚಾಯಕಗಳನ್ನು ಸ್ಥಾಪಿಸಲಾಯಿತು. ೧೯೨೮ರಲ್ಲಿ ಜಿಲ್ಲಾ ಬೋರ್ಡ್ ಕಾಯ್ದೆ ಪ್ರತ್ಯೇಕವಾಗಿ ವಿಧಾಯಿತವಾಯಿತು. ಇದರಿಂದ ಜಿಲ್ಲಾ ಬೋರ್ಡಿನವರಿಗೆ ಹಿಂದಿಗಿಂತಲೂ ಹೆಚ್ಚಾಗಿ ಅಧಿಕಾರವನ್ನು ಕೊಡಲಾಗಿದೆ. ಇದರಲ್ಲಿ ಮುಖ್ಯವಾದ ಒಂದು ಅಂಶವನ್ನು ಮಾತ್ರ ಸೂಚಿಸಬಹುದಾದರೆ ಸ್ತ್ರೀಯರಿಗೂ ಕೂಡ ಮತ ನೀಡಲು ಅಧಿಕಾರವನ್ನು ಕೊಡಲಾಯಿತು.[೨] ಜಿಲ್ಲಾ ಬೋರ್ಡುಗಳ ಕಾರ್ಯಕ್ಷೇತ್ರವು ಹೆಚ್ಚಿದಂತೆಲ್ಲಾ ಇವುಗಳ ಉತ್ಪತ್ತಿಯನ್ನು ಸಹ ಹೆಚ್ಚು ಮಾಡಲು ಅವಕಾಶ ಮಾಡಿಕೊಡಲಾಯಿತು. ಲೋಕಲ್ ಸೆಸ್ಸಿನ ಉತ್ಪತ್ತಿಯಲ್ಲಿ ಶೇಕಡಾ ೬೭ರಷ್ಟನ್ನು ಲೋಕಲ್ ಫಂಡ್ ಜನರಲ್ ಎಂಬ ಫಂಡಿಗೆ ಸೇರಿಸುವುದಕ್ಕೆ ಸರ್ಕಾರದವರ ಸುಪರ್ದಿನಲ್ಲಿಟ್ಟುಕೊಳ್ಳುವುದಕ್ಕೆ ಬದಲಾಗಿ ಪೂರಾ ಸೆಸ್ಸನ್ನು ಜಿಲ್ಲಾ ಬೋರ್ಡುಗಳ ವಶಕ್ಕೆ ೧೯೧೭-೧೮ರಲ್ಲಿ ವಹಿಸಿಕೊಡಲಾಯಿತು. ಜಿಲ್ಲಾ ಬೋರ್ಡಿನವರು ತಮ್ಮ ಆಡಳಿತಕ್ಕೆ ಒಳಪಟ್ಟ ಪ್ರದೇಶಗಳಲ್ಲಿ ಅಭಿವೃದ್ಧಿ ಕಾರ್ಯಗಳಿಗಾಗಿ ಸಾಲಗಳನ್ನು ಪಡೆಯುವುದು ಮತ್ತು ಆ ಸಾಲಗಳನ್ನು ತೀರಿಸುವುದರಲ್ಲಿ ಸ್ಪೆಷಲ್ ಸೆಸ್ಸ್ ಹಾಕಲು ಅವಕಾಶವೂ ಉಂಟಾಯಿತು. ಇದರಿಂದ ಕೋಲಾರ, ಮೈಸೂರು, ಶಿವಮೊಗ್ಗ ಮತ್ತು ಚಿತ್ರದುರ್ಗ ಜಿಲ್ಲಾ ಬೋರ್ಡುಗಳವರೂ ಸಾಲ ತೆಗೆದು ಕೆಲವು ರೈಲು ಮಾರ್ಗಗಳನ್ನು ಏರ್ಪಡಿಸಲು ಅನುಕೂಲವುಂಟಾಯಿತು. ಮೇಲೆ ಹೇಳಿದಂತೆ ಜಿಲ್ಲಾ ಬೋರ್ಡಿನವರ ಕಾರ್ಯಕ್ಷೇತ್ರವು ವಿಶಾಲವಾಯಿತಷ್ಟೇ. ಅದಕ್ಕೆ ಅನುಗುಣವಾಗಿ ಅನುದಾನ ಹೆಚ್ಚುವಂತೆ ಮಾಡುವುದಕ್ಕಾಗಿ ಸಲಹೆಗಳನ್ನು ಒಪ್ಪಿಸಲು ಸರ್ಕಾರದವರು ೧೯೩೭ರಲ್ಲಿ ಹಿರಯಣ್ಣಯ್ಯ ಕಮಿಟಿ ಎಂಬ ಒಂದು ಸಮಿತಿಯನ್ನು ಏರ್ಪಡಿಸಿದರು. ಆ ಕಮಿಟಿಯ ಸಲಹೆಗಳೇನೆಂಬುದು ತಮಗೆ ತಿಳಿದೇ ಇದೆ. ಇದರ ಮೇಲೆ ಸರ್ಕಾರದವರು ಜಿಲ್ಲಾ ಬೋರ್ಡುಗಳ ವರಮಾನದ ಅಭಿವೃದ್ಧಿಗಾಗಿ ಸೂಕ್ತವಾದ ಯೋಜನೆಗಳನ್ನು ಮಾಡಿರುತ್ತಾರೆ. ಆದಾಗ್ಯೂ ಕೂಡ ಹಾಲಿ ಜಿಲ್ಲಾ ಬೋರ್ಡುಗಳ ವರಮಾನಗಳು ಅನೇಕ ಕಾರಣಗಳಿಂದ ವೆಚ್ಚಗಳಿಗೆ ಸರಿದೂಗದೆ ಹೋಗುತ್ತಿವೆ. ಆದುದರಿಂದ, ಜಿಲ್ಲಾ ಬೋರ್ಡುಗಳ ಅನುದಾನವನ್ನು ಹೆಚ್ಚು ಮಾಡಬೇಕೆಂಬ ಆಕಾಂಕ್ಷೆಯು ಸೂಚಿತವಾಗುತ್ತಿದೆ. ಈ ಸಮ್ಮೇಳನದಲ್ಲಿ ಈ ವಿಚಾರವಾಗಿ ಬರತಕ್ಕ ಸಲಹೆಗಳನ್ನೆಲ್ಲಾ ಸರ್ಕಾರದವರು ಕೂಲಂಕಷವಾಗಿ ಪರಿಶೀಲಿಸಲು ಅನುಕೂಲವಾಗುವುದೆಂದು ನಾನು ದೃಢವಾಗಿ ನಂಬಿದ್ದೇನೆ. ತಮಗೆಲ್ಲಾ ಗೊತ್ತಿರುವಂತೆ ಜಿಲ್ಲಾ ಬೋರ್ಡುಗಳು ನೇರವಾಗಿ ಸರ್ಕಾರದೊಂದಿಗೆ ವ್ಯವಹರಿಸುವಂತೆಯೂ ಚುನಾವಣೆಗಳ ಸಂಬಂಧವಾಗಿ ಬರಬಹುದಾದ ತಕರಾರು ಅರ್ಜಿಗಳಲ್ಲಿ ಹೈಕೋರ್ಟ್‌ಗೆ ಅಪೀಲ್ ಮಾಡುವಂತೆಯೂ ಮತ್ತು ವಿದ್ಯಾಸಂಸ್ಥೆಗಳಿಗೆ ಸಹಾಯ ಮಾಡುವುದಲ್ಲದೆ ವಿದ್ಯಾಸಂಸ್ಥೆಗಳನ್ನು ಸಾಧ್ಯವಾದಲ್ಲಿ ತಾವೇ ಸ್ಥಾಪಿಸಿ ನಡೆಸಿಕೊಂಡು ಬರುವಂತೆಯೂ ಸಹ ಅಧಿಕಾರ ಕೊಡಲು ಇತ್ತೀಚೆಗೆ ಸರ್ಕಾರದವರು ಏರ್ಪಾಡು ಮಾಡಿದ್ದಾರೆ. ಈ ಕಾಲಕ್ಕೆ ಅನುಸಾರವಾಗಿ ಖಾಸಗಿ ಮಹನೀಯರನ್ನು ಒಳಗೊಂಡ ಮತ್ತು ಪ್ರಜಾಸೇವಾಕಾಂಕ್ಷೆಯುಳ್ಳ ಸ್ಥಳೀಯ ಸಂಸ್ಥೆಗಳಿಗೆ ಹೆಚ್ಚಿನ ಅಧಿಕಾರಗಳನ್ನು ಕೊಡಬೇಕೆಂಬುದು ಮತ್ತು ಇವುಗಳ ಆರ್ಥಿಕ ಸ್ಥಿತಿಯನ್ನು ಉತ್ತಮ ಪಡಿಸಬೇಕೆಂಬುದು ಸರ್ಕಾರದವರ ಮನೋಭಾವವಾಗಿದೆಯೆಂಬ ಅಂಶವನ್ನು ನಾನು ಹೊಸದಾಗಿ ಸೂಚಿಸಬೇಕಾಗಿಯೇ ಇಲ್ಲ. ಈ ಸಮ್ಮೇಳನದಲ್ಲಿ ಈ ಎಲ್ಲಾ

ವಿಚಾರಗಳಲ್ಲಿಯೂ ಕಾರ್ಯಕಾರಿಗಳಿಂದ ಸೂಕ್ತ ಸಲಹೆಗಳು ತಮ್ಮಿಂದ ಬರುವುದೆಂದು ನಾನು ದೃಢವಾಗಿ ನಂಬಿದ್ದೇನೆ.[೧೩]

ಈ ಸಭೆಯ ಕಾರ್ಯಕಾರಿ ಸಮಿತಿಯವರೂ ಮತ್ತು ತಾವು ನನ್ನನ್ನು ಈ ಸಭೆಗೆ ಅಧ್ಯಕ್ಷನನ್ನಾಗಿ ನೇಮಿಸಿ ತಮ್ಮಗಳೊಂದಿಗೆ ಇದ್ದು ತಮ್ಮ ಸಲಹೆಗಳನ್ನು ಪಡೆಯಲು ಅವಕಾಶ ಕಲ್ಪಿಸಿಕೊಟ್ಟಿದ್ದಕ್ಕಾಗಿ, ನಾನು ತಮ್ಮೆಲ್ಲರನ್ನು ಮತ್ತೊಮ್ಮೆ ವಂದಿಸಿ, ಈ ಸಭೆಯ ಕಾರ್ಯಕಲಾಪಗಳನ್ನು ಈ ಮೂಲಕ ಆರಂಭಿಸುತ್ತೇನೆ ಎಂದು ಚೆನ್ನಿಗರಾಮಯ್ಯನವರು ಸ್ಥಳೀಯ ಸಂಸ್ಥೆಗಳ ಮಹತ್ವದ ಬಗ್ಗೆ ಭಾಷಣ ಮಾಡಿದ್ದರು. ತಮಗೆ ನೀಡಿದಂತೆ ಖಾತೆಗಳನ್ನು ಸಮರ್ಥವಾಗಿ ನಿಭಾಹಿಸಿದರು.[೧೪]

### ೫.೩.ಶಿಕ್ಷಣ ಮತ್ತು ಕೃಷಿ ಮಂತ್ರಿಯಾಗಿ

ಆರ್.ಚನ್ನಿಗರಾಮಯ್ಯನವರು ಶಿಕ್ಷಣ ಮತ್ತು ಕೃಷಿ ಇಲಾಖೆ ಮಂತ್ರಿಗಳಾಗಿದ್ದಾಗ ಹಲವಾರು ಸುಧಾರಣೆಗಳನ್ನು ತಂದು ಆ ಇಲಾಖೆಗಳಿಗೆ ಪ್ರಾಮುಖ್ಯತೆಯನ್ನು ತಂದುಕೊಟ್ಟರು. ಗಾಂಧೀಜಿಯವರ ರಾಮರಾಜ್ಯದ ಹಾಗೂ ಗ್ರಾಮರಾಜ್ಯದ ಕನಸು ನನಸಾಗಬೇಕೆಂದರೆ ಜನಸಾಮಾನ್ಯರು ಪ್ರಜ್ಞಾವಂತರಾಗಿರಬೇಕು. ಇದಕ್ಕಾಗಿ ಶಿಕ್ಷಣ ಅತ್ಯಂತ ಅವಶ್ಯವಾದುದು ಎಂದು ಚನ್ನಿಗರಾಮಯ್ಯನವರು ಅಚಲವಾಗಿ ನಂಬಿದ್ದರು. ಆದ್ದರಿಂದ ಜನ ಸಮೂಹದ ಏಳ್ಗೆಗಾಗಿ ಶಿಕ್ಷಣ ಸಂಸ್ಥೆಗಳು ಚೆನ್ನಾಗಿ ಕೆಲಸ ನಿರ್ವಹಿಸುವಂತಹ ವಾತಾವರಣವನ್ನು ಸೃಷ್ಟಿಸಿದರು. ಈ ಒಂದು ಘನಕಾರ್ಯಕ್ಕಾಗಿ ತಮ್ಮನ್ನು ತಾವು ಸಮರ್ಪಿಸಿಕೊಂಡರು. ೫೦ರ ದಶಕದಲ್ಲಿ ಶಿಕ್ಷಣ ಕ್ಷೇತ್ರದಲ್ಲಿ ಕ್ರಾಂತಿ ಸ್ವರೂಪದ ಬದಲಾವಣೆ ಹಾಗೂ ಸುಧಾರಣೆಗಳನ್ನು ತಂದರು. ಹೀಗೆ ಮಾಡುವಲ್ಲಿ ಅವರಿಗೆ ಎದುರಾದ ಸಮಸ್ಯೆಗಳು ಹಲವಾರು. ತೊಂದರೆಗಳು ನೂರಾರು. ಆದರೆ ಚನ್ನಿಗರಾಮಯ್ಯನವರು ಎದೆಗುಂದಲಿಲ್ಲ. ಧೈರ್ಯದಿಂದಲೇ ಅವುಗಳನ್ನೆಲ್ಲ ಬಲು ಸಮರ್ಥವಾಗಿ ಎದುರಿಸಿದರು. ಶಿಕ್ಷಣವು ಮನುಷ್ಯನಲ್ಲಿದ್ದ ಉತ್ಕೃಷ್ಟತೆ ಅಥವಾ ಪರಿಪೂರ್ಣತೆಯನ್ನು ಹೊರ ಹಾಕುವ ಶ್ರೇಷ್ಠ ಸಾಧನವೆಂದವರು ಬಲವಾಗಿ ನಂಬಿದ್ದರು. ಸಮಾಜ ಸುಧಾರಣೆಗೆ ಶಿಕ್ಷಣ ಎಷ್ಟು ಅವಶ್ಯವೊ, ಒಬ್ಬನ ವ್ಯಕ್ತಿತ್ವ ರೂಪಿಸುವಲ್ಲಿಯೂ ಅದು ಅಷ್ಟೇ ಮಹತ್ವದ್ದೆಂಬುದು ಅವರ ವಾದವಾಗಿತ್ತು. ದೇಶದ ಎಲ್ಲಾ ಸಮಸ್ಯೆಗಳಿಗೆ, ಸಾಮಾಜಿಕ ಶೋಷಣೆಗೆ ವಿದ್ಯೆಯೇ ರಾಮಬಾಣ ಎಂದು ಮುನ್ನಡೆದರು. ಮಹಿಳೆಯೊಬ್ಬಳು ಕಲಿತರೆ ಕುಟುಂಬವೊಂದು ಕಲಿತಂತೆ ಎಂಬಂತೆ ಹೆಣ್ಣುಮಕ್ಕಳ ವಿದ್ಯಾಭ್ಯಾಸಕ್ಕಾಗಿ ಅವರು ವಿಶೇಷ ಕಾರ್ಯಕ್ರಮಗಳನ್ನು ಜಾರಿಗೆ ತಂದರು. ವಿದ್ಯಾರ್ಥಿನಿಯರಿಗಾಗಿ ವಸತಿ ಗೃಹಗಳು, ಪ್ರತ್ಯೇಕ ಶಾಲೆಗಳು ನಿರ್ಮಾಣಗೊಂಡವು. ಇದರಂತೆಯೇ ಗ್ರಾಮೀಣ ಭಾಗದಲ್ಲಿ ಸಾಕ್ಷರತಾ ಪ್ರಮಾಣ ಕಡಿಮೆಯಿರುವುದನ್ನು ಕಣ್ಣಾರೆ ಕಂಡಿದ್ದ ಚೆನ್ನಿಗರಾಮಯ್ಯನವರು ವಯಸ್ಕರ ಶಿಕ್ಷಣಕ್ಕಾಗಿಯೂ ವಿಶೇಷ ಒತ್ತನ್ನು ಕೊಟ್ಟರು. ತಮ್ಮ ಬಾಲ್ಯದಲ್ಲಿ ಅವರು ಕೇವಲ ಎಸ್.ಎಸ್.ಎಲ್.ಸಿ. ಮುಗಿಸಲು ಊರೂರು ಅಲೆಯಬೇಕಾಗಿ ಬಂದ ಪ್ರಸಂಗವನ್ನು ಅವರು ಸಾಧನೆ ಪಟ್ಟಂತೆ ಕಾಣುತ್ತದೆ. ತಮಗಾದ ಅನನುಕೂಲ ತಮ್ಮ ಅಧಿಕಾರಾವಧಿಯಲ್ಲಿ ತನ್ನ ರಾಜ್ಯದ ಮಕ್ಕಳಿಗೆ ಆಗದಿರಲೆಂದು ಗ್ರಾಮೀಣ ಭಾಗದಲ್ಲಿ ಸಾವಿರಾರು ಸಂಖ್ಯೆಯಲ್ಲಿ ಶಾಲೆ ಕಾಲೇಜುಗಳನ್ನು ಪ್ರಾರಂಭಿಸಲು

ಪ್ರೋತ್ಸಾಹಿಸಿದರು, ಮಂಜೂರು ಮಾಡಿದರು. ಶಿಕ್ಷಣ ಪ್ರಸಾರವನ್ನು ಬಹಳ ನಿಷ್ಠೆಯಿಂದ ಅಪಾರ ಪರಿಶ್ರಮದಿಂದ ನಿರಂತರವಾಗಿ ಕೈಗೊಂಡರು. ಬಾಲ್ಯದಲ್ಲಿ ಸ್ವತಃ ಆರ್ಥಿಕ ತೊಂದರೆಯನ್ನನುಭವಿಸಿದ್ದ ಅವರು ಬಡ ವಿದ್ಯಾರ್ಥಿಗಳಿಗಾಗಿ ಇದ್ದ ಶಾಲಾ ಶುಲ್ಕ ರಿಯಾಯಿತಿಯನ್ನು ಇನ್ನೂ ಹೆಚ್ಚು ಜನರಿಗೆ ಅನುಕೂಲವಾಗುವಂತೆ ವಿಸ್ತರಿಸಿದರು. ಎಲ್ಲಾ ಜಾತಿಯ ಬಡವರಿಗೂ ಇದು ಸಮನಾಗಿ ಲಭ್ಯವಾಗುವಂತೆ ನೋಡಿಕೊಂಡರು. ಆದರೆ ದಲಿತ ವಿದ್ಯಾರ್ಥಿಗಳಿಗಾಗಿ ಹೆಚ್ಚಿನ ಅನುದಾನವನ್ನು ಮೀಸಲಾಗಿಟ್ಟಿದ್ದರು.[೧೫]

ಕ್ರಾಂತಿಕಾರಿ ಶಿಕ್ಷಣ ನೀತಿಯ ಪ್ರಾಮುಖ್ಯತೆ ಹೆಚ್ಚಾಗಿ ಪ್ರಾಥಮಿಕ ಶಿಕ್ಷಣವನ್ನು ಉಚಿತವಾಗಿ ನೀಡಲು ಪ್ರೋತ್ಸಾಹಿಸಲಾಯಿತು. ಇದರ ಸದುಪಯೋಗವನ್ನು ಎಲ್ಲರೂ ಪಡೆದುಕೊಳ್ಳಲೆಂಬ ಮಹದುದ್ದೇಶದಿಂದ ರಾಜ್ಯದ ಮೂಲೆ ಮೂಲೆಗಳಲ್ಲಿ ಶಾಲಾಕಾಲೇಜುಗಳಲ್ಲಿ ವಿದ್ಯಾರ್ಥಿ ವಸತಿ ನಿಲಯಗಳನ್ನು ಪ್ರಾರಂಭಿಸಲಾಯಿತು. ಬರೀ ಶಾಲೆಗಳ ಸ್ಥಾಪನೆ. ಕಟ್ಟಡಗಳ ನಿರ್ಮಾಣದಂತಹ ಭೌತಿಕ ಬೆಳವಣಿಗೆಗಳಷ್ಟೇ ಶಿಕ್ಷಣದ ಗುಣಮಟ್ಟ ಸುಧಾರಿಸಲು ಸಾಧ್ಯವಿಲ್ಲವೆಂಬುದು ಚನ್ನಿಗರಾಮಯ್ಯನವರ ಬಲವಾದ ನಂಬುಗೆಯಾಗಿತ್ತು. ಶಾಲೆಗಳ ಸಂಖ್ಯೆಯ ವೃದ್ಧಿಯ ಜೊತೆಗೂ ಶಿಕ್ಷಣದ ಗುಣಮಟ್ಟವೂ ವೃದ್ಧಿಸಬೇಕು ಅಂದರೆ ನೀಡುವ ಶಿಕ್ಷಣ ಯೋಗ್ಯವಾಗಿರಬೇಕು ಎಂದು ನಂಬಿದ್ದರು. ಸರ್ವರೂ ಜಾತಿಭೇದ, ಲಿಂಗಭೇದ ಹಾಗೂ ಧರ್ಮಭೇದಗಳ ಅಂತರವಿರದಂತಹ ಸಾರ್ವತ್ರಿಕ ಸಮಾನ ಸ್ವರೂಪದ ಕಲಿಕಾ ಶಿಕ್ಷಣಕ್ಕೆ ಕನಿಷ್ಠ ಅವಕಾಶಗಳಾದರೂ ಇರಬೇಕೆಂದು ಚಿಂತಿಸಿದರು. ಶಿಕ್ಷಣವು ಬದುಕಿಗೊಂದು ಸಾಧನ. ನಮ್ಮ ಬದುಕು ಉದ್ದೇಶಾತ್ಮಕವಾದದ್ದು. ಶಿಕ್ಷಣವು ಆ ಉದ್ದೇಶಕ್ಕೆ ಸಾಧನವಾಗಿ ನಮ್ಮೊಳಗಿನ ಅತ್ಯುತ್ತಮವಾದದ್ದನ್ನು ಹೊರತರುವಂತಾಗಬೇಕು.

ಚನ್ನಿಗರಾಮಯ್ಯನವರು ದೀನ ದಲಿತರ ವಿದ್ಯಾಭ್ಯಾಸಕ್ಕೆ ಹೆಚ್ಚಿನ ಒತ್ತನ್ನು ನೀಡಿದ್ದರು. ಅವರಿಗೆ ಶಿಕ್ಷಣದ ಅರಿವನ್ನು ಮೂಡಿಸಲು ಪ್ರಯತ್ನಿಸಿದ್ದರು. ಇನ್ನು ನಿಮ್ಮ ವರ್ಗದ ವಿದ್ಯಾರ್ಥಿಗಳು ಯಾವ ಯಾವ ಕಾಲಕ್ಕೆ ಎಷ್ಟೆಷ್ಟು ಜನ ಪ್ರಾಥಮಿಕ ಶಾಲೆಯಲ್ಲಿ, ಮಾಧ್ಯಮಿಕ ಶಾಲೆಯಲ್ಲಿ ಮತ್ತು ಕಾಲೇಜುಗಳಲ್ಲಿ ವ್ಯಾಸಂಗ ಮಾಡುತ್ತಿದ್ದರು ಎಂಬ ಬಗ್ಗೆ ಅಂಕಿ ಅಂಶಗಳನ್ನು ನೀಡಿದರು. ಅದು ಕೆಳಗಿನಂತಿದೆ.

| ಶಾಲೆಗಳು | ವಿದ್ಯಾರ್ಥಿಗಳ ಸಂಖ್ಯೆ |
|---|---|
| ಪ್ರೈಮರಿ ಸ್ಕೂಲುಗಳಲ್ಲಿ ೧೯೪೬-೪೭ರಲ್ಲಿ | ೪೨೬ |
| ಕಾಲೇಜುಗಳಲ್ಲಿ ೧೯೫೬-೫೭ರಲ್ಲಿ | ೨೦೬ |
| ಕಾಲೇಜುಗಳಲ್ಲಿ ೧೯೪೬-೪೭ರಲ್ಲಿ | ೯೨೩ |
| ಹೈಸ್ಕೂಲು ೧೯೫೬-೫೭ರಲ್ಲಿ | ೧.೦೬೩ |
| ಹೈಸ್ಕೂಲು | ೯.೫೩೨ |
| ಪ್ರೈಮರಿ ಸ್ಕೂಲು | ೪೬.೨೫೫ |

ಈ ರೀತಿಯ ಅಂಕಿ ಅಂಶಗಳನ್ನು ನೀಡಿದರು. ವಿದ್ಯಾಭ್ಯಾಸ ಮಾಡುವ ಹುಡುಗರ ಸಂಖ್ಯೆ ಪ್ರತಿ ವರ್ಷ ಜಾಸ್ತಿಯಾಗುತ್ತಾ ಬಂದಿದೆ. ೧೯೪೬-೪೭ರಲ್ಲಿ ೨೦೬ ಕಾಲೇಜು ವಿದ್ಯಾರ್ಥಿಗಳ ಸಂಖ್ಯೆ ಇದ್ದುದು

ಪ್ರತಿ ವರ್ಷ ಜಾಸ್ತಿಯಾಗುತ್ತಾ ಬಂದಿದೆ. ಪ್ರಗತಿ ಕಡಿಮೆ ಏನೂ ಆಗಿಲ್ಲ. ಅಂದ ಮಾತ್ರಕ್ಕೆ ಸಾಕಷ್ಟು ಆಗಿದೆ ಎಂದು ನಾನು ಹೇಳುವುದಿಲ್ಲ. ಇನ್ನೂ ಆಗಬೇಕಾದುದು ಬಹಳವಿದೆ. ಆದರೆ ನಿಧಾನವಾಗಿ ಕ್ರಮೇಣ ಆಗುತ್ತಾ ಇದೆ. ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದರು.

೧೯೫೦ ಜನವರಿ ೧೫ರಂದು ಬೈರಮಂಗಲ ಮತ್ತು ರಾಮನಗರ ತಾಲ್ಲೂಕುಗಳಲ್ಲಿ ಒಂದೊಂದು ವಸತಿ ನಿಲಯಗಳನ್ನು ಉದ್ಘಾಟಿಸಿದರು. ಮಂತ್ರಿಗಳಾಗಿದ್ದಾಗ ಚಿತ್ರದುರ್ಗ, ತುಮಕೂರು, ಮೈಸೂರು, ಕೋಲಾರ ಮುಂತಾದ ಜಿಲ್ಲೆಗಳಿಗೆ ಭೇಟಿ ನೀಡಿ ಸಮಸ್ಯೆಗಳನ್ನು ಆಲಿಸುತ್ತಿದ್ದರು. ತಮ್ಮಿಂದ ಆಗುವಂತಹ ಸಮಸ್ಯೆಗಳನ್ನು ಸ್ಥಳದಲ್ಲಿಯೇ ಪರಿಹರಿಸುತ್ತಿದ್ದರು.[೬] ವಿದ್ಯಾರ್ಥಿಗಳು ವಸತಿ ನಿಲಯಗಳಲ್ಲಿ ವಿದ್ಯಾಭ್ಯಾಸ ಮಾಡುತ್ತಿರುವವರಿಗೆ ೨೦೦ ರೂಪಾಯಿಯ ವಿದ್ಯಾರ್ಥಿ ವೇತನದಿಂದ ೩೦೦ ರೂಪಾಯಿಗಳಿಗೆ ಹೆಚ್ಚಿಸಲಾಯಿತು ಹಾಗೂ ೧೦ ರೂಪಾಯಿಗಳನ್ನು ವಿದ್ಯಾರ್ಥಿ ವೇತನ ನೀಡುವ ಕ್ರಮವನ್ನು ಜಾರಿಗೊಳಿಸಿದರು. ಪ್ರತಿ ವರ್ಷ ವಿದ್ಯಾರ್ಥಿಗಳ ಸಂಖ್ಯೆಗೆ ಅನುಗುಣವಾಗಿ ಬೊಕ್ಕಸದಿಂದ ಹಣವನ್ನು ಮೀಸಲಿಟ್ಟಿದ್ದರು. ವಿದ್ಯಾಭ್ಯಾಸಕ್ಕೆ ಉತ್ತೇಜನ ನೀಡಲು ಪ್ರಯತ್ನಿಸುತ್ತಿದ್ದರು. ಮೈಸೂರು ಸರ್ಕಾರದಲ್ಲಿ ಕಾಂಗ್ರೆಸ್ ಪಕ್ಷವು ಅಧಿಕಾರದಲ್ಲಿರುವಾಗ ಎಲ್ಲ ವಿಧದಲ್ಲೂ ಹಿಂದುಳಿದವರಿಗಾಗಿ ದುಡಿಯಬೇಕು, ಸಹಾಯ ಮಾಡಬೇಕು ಎಂಬ ಅಭಿಲಾಷೆಯಿದೆ. ಇಂಥ ಸಂದರ್ಭದಲ್ಲಿ ವಿದ್ಯಾರ್ಥಿಗಳಿಗೆ ಯಾವ ವಿಧದಲ್ಲೂ ಕುಂದುಕೊರತೆ ಬರುವುದಿಲ್ಲ. ಸಹಾಯ ಮಾಡುತ್ತೇವೆ ಎಂಬ ಭರವಸೆಯನ್ನು ಇಟ್ಟುಕೊಳ್ಳಬಹುದು ಎಂದು ತಿಳಿಸುತ್ತಿದ್ದರು.

ಚನ್ನಿಗರಾಮಯ್ಯನವರು ಗ್ರಾಮೀಣ ಪ್ರದೇಶದಿಂದ ಬಂದವರಾಗಿದ್ದರಿಂದ ಕೃಷಿ ಇಲಾಖೆಯನ್ನು ವಹಿಸಿಕೊಂಡು ಕೃಷಿಯನ್ನು ಅಭಿವೃದ್ಧಿ ಪಡಿಸಬೇಕೆಂದು ಪ್ರಯತ್ನಿಸಿದರು. ಶೇಕಡ ೮೦ಕ್ಕಿಂತ ಅಧಿಕ ಜನರು ಗ್ರಾಮೀಣ ಪ್ರದೇಶಗಳಲ್ಲಿ ಜೀವಿಸುತ್ತಿದ್ದರು. ಉದ್ಯೋಗ ಅವಕಾಶಗಳಿಂದ ವಂಚಿತರಾಗಿದ್ದು, ಅವರನ್ನು ಸಾಮಾಜಿಕ, ಆರ್ಥಿಕವಾಗಿ ಸದೃಢವಾಗಿ ಮಾಡಬೇಕೆಂಬ ಚಿಂತನೆಯನ್ನು ನಡೆಸುತ್ತಿದ್ದರು. ರಾಜ್ಯದಲ್ಲಿ ತೋಟಗಾರಿಕೆಗೆ ವಿಶೇಷ ಒತ್ತು ಕೊಟ್ಟು ಅದನ್ನು ಸಮಗ್ರವಾಗಿ ಉಪಯುಕ್ತವಾಗಿ ಅಭಿವೃದ್ಧಿಪಡಿಸಿದ ಕೀರ್ತಿ ಚನ್ನಿಗರಾಮಯ್ಯನವರಿಗೆ ಸಲ್ಲುತ್ತದೆ. ಕೃಷಿಯನ್ನೇ ನಂಬಿ ಜೀವನ ನಡೆಸುವ ರೈತಾಪಿ ವರ್ಗದವರಿಗೆ, ಕಡಿಮೆ ದರದಲ್ಲಿ ಬಿತ್ತನೆ ಬೀಜ, ಗೊಬ್ಬರ ಮುಂತಾದವುಗಳನ್ನು ದೊರೆಯುವಂತೆ ಮಾಡಿದರುಯ ದಲಿತವರ್ಗಗಳಿಗೆ ವ್ಯವಸಾಯ ಮಾಡಲು ಉತ್ತೇಜನ ನೀಡಿ ರಾಜ್ಯದಲ್ಲಿರುವ ಸೇಂದಿವನಗಳನ್ನು ಅಳಿಸಿ ವ್ಯವಸಾಯದ ಯೋಗ್ಯ ಭೂಮಿಯನ್ನಾಗಿ ಪರಿವರ್ತಿಸಿ ದಲಿತರಿಗೆ ನೀಡಿದರು. ದೇಶಕ್ಕೆ ಆಧಾರಭೂತವಾಗಿರುವವನು, ದೇಶದ ಜನರಿಗೆ ಬೇಕಾದ ಆಹಾರವನ್ನು ಸೃಷ್ಟಿ ಮಾಡತಕ್ಕವನು ರೈತ. ಅವನ ಸ್ಥಿತಿ ಚಿಂತಾಜನಕವಾಗಿದೆ. ಅವನಿಗೆ ಉತ್ತೇಜನ ಕೊಡದ ಹೊರತು ದೇಶ ಮುಂದುವರಿಯಲಾರದೆಂದು ತಿಳಿದಿದ್ದರು. ರೈತ ಮುಖ್ಯವಾಗಿ ಅವಲಂಬಿಸಿಕೊಂಡಿರುವುದು ಪ್ರಕೃತಿಯನ್ನು. ಪ್ರಕೃತಿಯ ಅನೇಕ ಪ್ರಕೋಪಗಳನ್ನು ಸಹಿಸಿಕೊಂಡು ಆತ ಆಹಾರವನ್ನು ಬೆಳೆಯಬೇಕು. ಅವನಿಗಿರತಕ್ಕ ಸಮಸ್ಯೆಗಳನ್ನು ಬಗೆಹರಿಸುವುದಕ್ಕೆ ಮುಖ್ಯವಾಗಿ ಏನೇನು ಮಾಡಬೇಕೆಂದು ವ್ಯವಸಾಯದ ಇಲಾಖೆಯವರು ನಿಗಾವಹಿಸಬೇಕು ಎಂದು ಸೂಚಿಸುತ್ತಿದ್ದರು.

ಚೆನ್ನಿಗರಾಮಯ್ಯನವರು ಶಿಕ್ಷಣ ಮತ್ತು ಕೃಷಿ ಇಲಾಖೆಯಲ್ಲಿ ಗಣನೀಯವಾದ ಬದಲಾವಣೆಯನ್ನು ತರುವಲ್ಲಿ ಯಶಸ್ವಿಯಾದರು. ಜಗತ್ತಿನಾದ್ಯಂತ ಅದರಲ್ಲಿಯೂ ಮುಖ್ಯವಾಗಿ, ಸಿರಿವಂತ ರಾಷ್ಟ್ರಗಳಲ್ಲಿ ಒಬ್ಬ ವ್ಯಕ್ತಿಯ ಹಿರಿಮೆ ಗರಿಮೆ ನಿರ್ಧಾರವಾಗುವುದು ಅವನ ಜ್ಞಾನ ಮತ್ತು ಶಿಕ್ಷಣಗಳಿಂದ. ಇನ್ನಿತರ ಅಭಿವೃದ್ಧಿ ಶೀಲ ರಾಷ್ಟ್ರಗಳಲ್ಲಿಯೂ ಒಬ್ಬ ವ್ಯಕ್ತಿಯ ಸ್ಥಾನಮಾನ ನಿರ್ಧಾರವಾಗುವುದಕ್ಕೆ ಅವನ ಬದುಕಿನ ಮಟ್ಟವೇ ಮುಖ್ಯ ಮಾನದಂಡವಾಗಿರುತ್ತದೆ. ಆದರೆ ಭಾರತದಲ್ಲಿ ... ತೀರಾ ವಿಚಿತ್ರ. ಎಲ್ಲವೂ ತಿರುವು ಮುರುವು. ಇಲ್ಲಿ ಒಬ್ಬ ವ್ಯಕ್ತಿಯ ಸ್ಥಾನಮಾನ ನಿರ್ಧಾರವಾಗುವುದು ಅವನ ಜಾತಿಯಿಂದ. ಅವನು ಯಾವ ಜಾತಿಯವನು ಎಂಬ ಆಧಾರದ ಮೇಲೆ ಅವನ ಬದುಕಿನ ಅಂತಸ್ತು ನಿರ್ಧರಿಸಲ್ಪಡುತ್ತದೆ. ಶಿಕ್ಷಣವೇತ್ತರಾದವರು ಸ್ವಾಭಿಮಾನದ ಪ್ರಜ್ಞೆ, ಬೌದ್ಧಿಕ ಪ್ರಾಮಾಣಿಕತೆ ಸಾಮಾಜಿಕ ವೈರುಧ್ಯಗಳಿಗೆ ಚಿಕಿತ್ಸೆ ನೀಡುವಂತಹ ವ್ಯಕ್ತಿತ್ವ ಬರಬೇಕೆಂಬ ದೃಢ ಅಭಿಮತಗಳಿವೆ.[೧೭]

## ಅಡಿಟಿಪ್ಪಣಿಗಳು

೦೧. ಪ್ರೊ.ಜಿ.ವಿ.ಆನಂದಮೂರ್ತಿ (ಸಂ), ಜೀವನದಿ, ವೈ.ಕೆ.ರಾಮಯ್ಯ ಟ್ರಸ್ಟ್, ತುಮಕೂರು, ೨೦೦೨, ಪುಟ-೯೨

೦೨. ರಾಕೇಶ್, ಎಚ್.ಎಸ್., ಮೈಸೂರು ಚಲೋ ಚಳವಳಿ, ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಅಪ್ರಕಟ ಎಂ.ಫಿಲ್ ಪ್ರಬಂಧ, ೨೦೦೮, ಪುಟ-೭೪

೦೩. ಅದೇ ಪುಟ-೭೫

೦೪. ಅದೇ ಪುಟ-೭೬

೦೫. ಶ್ರೀಮತಿ ಶಾರದಶಂಕರ್, ಮಗಳ ನೆನಪಿನಾಳದಲ್ಲಿ ಆರ್.ಸಿ., ಅಟದ ಬುಕ್ ಹೌಸ್, ಬೆಂಗಳೂರು, ೨೦೧೧, ಪುಟ-೭೭

೦೬. ಅದೇ ಪುಟ-೪೩

೦೭. ಮೈಸೂರು ಅಡ್ಮಿಸ್ಟ್ರೇಟೀವ್ ರಿಪೋರ್ಟ್ ಕಡತದ ಸಂಖ್ಯೆ ೧೯೪೯ರಿಂದ ೫೧ರವರೆಗೆ (ಕ.ರಾ.ಪ.ಇ) ಬೆಂಗಳೂರು

೦೮. ಅದೇ, ೧೯೫೦, ಪುಟ-೫೧

೦೯. ಮೈಸೂರು ಅಡ್ಮಿಸ್ಟ್ರೇಟೀವ್ ರಿಪೋರ್ಟ್ ಕಡತದ ಸಂಖ್ಯೆ ೧೯೪೭ರಿಂದ ೧೯೪೮ರವರೆಗೆ (ಕ.ರಾ.ಪ.ಇ) ಬೆಂಗಳೂರು

೧೦. ಅದೇ ಪುಟ-೧೧೩೭

೧೧. ಭರಂಪುರ ಕಣುಮಪ್ಪ, ಮಾತಂಗ ಸಮಾಜದ ದಿಗ್ದರ್ಶಕರು, ಆದಿಜಾಂಬವ ವಿದ್ಯಾಭಿವೃದ್ಧಿ ಟ್ರಸ್ಟ್, ಬೆಂಗಳೂರು, ೨೦೧೦, ಪುಟ-೨೫

೧೨. ಅದೇ ಪುಟ-೨೬

೧೩. ಅದೇ ಪುಟ-೨೭

೧೪. ಅದೇ ಪುಟ-೨೯

೧೫. ಮೈಸೂರು ಅಡ್ಮಿಸ್ಟ್ರೇಟೀವ್ ರಿಪೋರ್ಟ್ ಕಡತದ ಸಂಖ್ಯೆ ೧೯೪೭ರಿಂದ ೧೯೫೮ರವರೆಗೆ (ಕ.ರಾ.ಪ.ಇ) ಬೆಂಗಳೂರು

೧೬. ಅದೇ ಪುಟ-೮೩೬

೧೭. ಅದೇ ಪುಟ-೯೪೮

# ಅಧ್ಯಾಯ - ಐದು

## ಆರ್.ಚನ್ನಿಗರಾಮಯ್ಯ ಅವರ ದಲಿತಪರ ಚಿಂತನೆಗಳು

- ೫.೧. ಸಾಮಾಜಿಕ ಚಿಂತನೆಗಳು
  - ೫.೧.೧. ಪಾನ ನಿರೋಧ
  - ೫.೧.೨. ದೇವಾಲಯ ಪ್ರವೇಶ
  - ೫.೧.೩. ಸಹಪಂಕ್ತಿ ಭೋಜನ
- ೫.೨. ಶೈಕ್ಷಣಿಕ ಚಿಂತನೆಗಳು
  - ೫.೨.೧. ವಿದ್ಯಾಸಂಸ್ಥೆಗಳ ಸ್ಥಾಪನೆ
  - ೫.೨.೨. ವಿದ್ಯಾರ್ಥಿ ನಿಲಯಗಳ ಸ್ಥಾಪನೆ
- ೫.೩. ರಾಜಕೀಯ ಚಿಂತನೆಗಳು

## ಅಧ್ಯಾಯ - ಐದು

# ಆರ್.ಚನ್ನಿಗರಾಮಯ್ಯ ಅವರ ದಲಿತಪರ ಚಿಂತನೆಗಳು

ಭಾರತದ ಸಾಮಾಜಿಕ ಪದ್ಧತಿಯ ಪ್ರಧಾನ ಲಕ್ಷಣ ಎಂದರೆ ಜಾತಿ. ಇದು ಸಾಮಾಜಿಕ ವ್ಯವಸ್ಥೆಗೆ ಅಡಿಪಾಯವಷ್ಟೇ ಅಲ್ಲ, ಸಾಮಾಜಿಕ ಸಂಸ್ಥೆಯಾಗಿ ಬಲಗೊಂಡು ಪ್ರಾಚೀನ ಕಾಲದಿಂದ ಇಂದಿನ ಆಧುನಿಕ ಕಾಲದವರೆಗೂ ಮುಂದುವರೆಯುತ್ತಿದೆ. ಜಾತಿ ಎಂದರೆ ಆಳುವ ವರ್ಗಗಳು ಶ್ರಮ, ಶೋಷಣೆಗೆ ನಿರ್ಮಿಸಿಕೊಂಡ ಕೆಟ್ಟ ವ್ಯವಸ್ಥೆ. ಭಾರತದ ಸಾಮಾಜಿಕ ವ್ಯವಸ್ಥೆಯಲ್ಲಿ ಜಾತಿ ಪ್ರಾಚೀನಕಾಲದಿಂದ ಇಂದಿನ ಆಧುನಿಕ ಕಾಲದವರೆಗೂ ದುಡಿಯುವ ಸಮೂಹಗಳನ್ನು ಶೋಷಿಸುವ ಹಾಗೂ ದಮನಿಸುವ ವಿಧಾನಗಳಲ್ಲಿ ಪ್ರಧಾನ ಪಾತ್ರ ವಹಿಸುತ್ತದೆ. ಆಧುನಿಕ ಸನ್ನಿವೇಶಕ್ಕೆ ಹೋಲಿಸಿ ಹೇಳುವುದಾದರೆ ಪೂಜಾರಿಯ ಸ್ಥಳದಲ್ಲಿ ಪುರೋಹಿತ, ಪಟೇಲನ ಸ್ಥಳದಲ್ಲಿ ಪೊಲೀಸ್, ವರ್ತಕನ ಜಾಗದಲ್ಲಿ ಜಾಗತೀಕರಣ, ಜಮೀನುದಾರರ ಜಾಗದಲ್ಲಿ ಖಾಸಗೀಕರಣಗಳು ಬಂದು ಕೂತಿವೆ. ಯಾವ ಹಾವಾದರೇನು ವಿಷವೊಂದೆ ಎಂಬಂತೆ, ವೈರಿ ಯಾರಾದರೇನು ಅವರೆಲ್ಲ ಒಂದೆ ಎನ್ನುವ ಸಂದರ್ಭದಲ್ಲಿ ಇಂದು ದಲಿತರು ಜೀವನ ಸಾಗಿಸಬೇಕಾಗಿದೆ.[೧]

ಅಸ್ಪೃಶ್ಯತೆಯ ವಿಷಬಳ್ಳಿಯ ಜಾಲ ನಿಸರ್ಗದತ್ತವಾದ ಹಾಗೂ ಮಾನವ ನಿರ್ಮಿತವಾದ ಎರಡು ವ್ಯವಸ್ಥೆಗಳ ಮೇಲೂ ಹಾಸಿಕೊಂಡಿವೆ. ನಿಸರ್ಗದತ್ತವಾದ ಗಾಳಿ, ಬೆಳಕು, ನೀರು, ನೆಲ ಇವುಗಳ ಮೇಲೆ ಉನ್ನತ ಜಾತಿಯ ಜನತೆ ಆಧಿಪತ್ಯವನ್ನು ಸಾಧಿಸಿ ಒಡೆದು ಆಳುತ್ತಿದ್ದ ಮನುಷ್ಯನಿಗೆ ಸಿಗಬೇಕಾದ ಮೂಲಭೂತ ವಸ್ತುಗಳನ್ನು ಕಬಳಿಸಲಾಗಿದೆ. ನಿಸರ್ಗದತ್ತವಾದ ಸಾರ್ವಜನಿಕ ವಸ್ತುಗಳ ಮೇಲೆ ಎಲ್ಲರ ಹಕ್ಕುಗಳಿವೆ. ಇವು ಸರಿಯಾಗಿ ಹಂಚಿಕೆಯಾಗಿಲ್ಲ. ಅಸ್ಪೃಶ್ಯರಿಗೆ ಸೋಂಕಿದ ಗಾಳಿ, ಬೆಳಕು, ನೆರಳು ನಮಗೆ ಸೋಂಕಬಾರದು ಎನ್ನುವ ಕಠೋರ ನೀತಿ ಯಾರಿಗೂ ಅಚ್ಚರಿ ಹುಟ್ಟಿಸುವಂತಹದು. ಅಸ್ಪೃಶ್ಯ ಎನ್ನುವ ಮಾತೇ ವಿಷಕಾರಿಯಾದುದು. ಮನುಷ್ಯ ಮನುಷ್ಯರ ನಡುವೆ ಅಡ್ಡಗೋಡೆಯಾಗಿ ನಿಂತುಕೊಂಡಿದ್ದು. ಇಂದು ಇದು ಬಳಕೆಯಲ್ಲಿದ್ದು ಮನುಷ್ಯ ಮನುಷ್ಯರ ನಡುವೆ ಹೆಚ್ಚಿನ ಅಂತರವನ್ನು ತಂದಿದೆ. ಅಗತ್ಯವಾಗಿರುವ ನೀರು ಬಳಕೆಯಲ್ಲಿ ಅಮಾನುಷವಾದ ಅಪಮಾನ, ನೀತಿ ಬಳಕೆಯಲ್ಲಿವೆ. ಇಲ್ಲಿ ನೀರು ಮುಟ್ಟುವುದಿರಲಿ ನೀರಿರುವ

ಸ್ಥಳ ಸ್ಪರ್ಶವೇ ಅಪರಾಧವೆನ್ನುವುದು, ನಿಲ್ಲುವ ನೆಲಕ್ಕೆ ನಿಷೇಧ ಹೇರುವುದು ಈ ಸ್ವರೂಪದ ಎಲ್ಲಾ ನಿಸರ್ಗದತ್ತ ವಸ್ತುಗಳ ಅಧಿಪತ್ಯ ಸಾಧಿಸಿದ ಮನುಷ್ಯನ ಸೇಡಿನ ಕೃತ್ಯಗಳು ಅಸ್ಪೃಶ್ಯತೆಯ ಭಾಗಗಳಾಗಿವೆ. ದೇವರು, ಸ್ವರ್ಗ, ನರಕ, ಪಾಪ, ಪುಣ್ಯ, ಸಾಧನ, ಸಂಕೇತ ಇಂಥವುಗಳ ಮೇಲೂ ಮತ ಧರ್ಮದ ಹೆಸರಲ್ಲಿ ಅಸ್ಪೃಶ್ಯತೆಯ ಕರಾಳ ಛಾಯೆ ಹರಡಿಕೊಂಡಿದೆ. ಹೀಗೆ ಮನುಷ್ಯ ಮನುಷ್ಯರ ನಡುವೆ ಅಷ್ಟೇ ಅಲ್ಲದೆ ನೈಸರ್ಗಿಕ ಹಾಗೂ ನಿರ್ಮಿತ ವಸ್ತುಗಳಿಗೂ ವಿಷ ವ್ಯಾಪಿಸಿದೆ. ಇಂಥವುಗಳ ವಿರುದ್ಧ ಧ್ವನಿ ಎತ್ತುವುದು ಅನಿವಾರ್ಯದ ಸಂಗತಿಯಾಗಿದೆ.[೨] ಶತಮಾನಗಳಿಂದ ದಲಿತರು, ಕೆಳವರ್ಗದವರು ಸಮಾಜಲ್ಲಿರುವ ಅಸ್ಪೃಶ್ಯತೆ, ಅಸಮಾನತೆ, ಜಾತಿ ವ್ಯವಸ್ಥೆಯಿಂದ ಬಳಲುತ್ತಿದ್ದಾರೆ. ಸಮಾಜದಲ್ಲಿರುವ ಈ ತಾರತಮ್ಯವನ್ನು ತೊಡೆದು ಹಾಕಲು ಬುದ್ಧ ಬಸವನ ಕಾಲದಿಂದಲೂ ಪ್ರಯತ್ನಗಳು ನಡೆಯುತ್ತಲೇ ಇವೆ. ಆದರೆ ಇವರ ಪ್ರಯತ್ನಗಳು ಅಸಮಾನತೆ, ಅಸ್ಪೃಶ್ಯತೆ, ಜಾತಿವ್ಯವಸ್ಥೆಯನ್ನು ಸಂಪೂರ್ಣವಾಗಿ ನಾಶ ಮಾಡಲು ಆಗಲಿಲ್ಲ. ಅಸ್ಪೃಶ್ಯರನ್ನು ತುಳಿಯುತ್ತಿರುವ ಮೇಲ್ಜಾತಿಯವರ ಮೇಲೂ ಇವರ ಪ್ರಯತ್ನಗಳು ಪರಿಣಾಮ ಬೀರಲಿಲ್ಲ. ಬುದ್ಧ, ಬಸವನ ಧರ್ಮಗಳು ಕಾಲಾನುಕ್ರಮದಲ್ಲಿ ಜಾತಿ ಧರ್ಮಗಳಾಗಿ ಪರಿವರ್ತನೆಗೊಂಡಿರುವುದು ದೇಶದ ಕರಾಳ ಇತಿಹಾಸವಾಗಿದೆ. ಗಾಂಧೀಜಿಯವರು 'ಬ್ರಿಟಿಷರೇ ನಮ್ಮ ದೇಶಬಿಟ್ಟು ತೊಲಗಿರಿ' ಎಂದು ಚಳುವಳಿ ಮಾಡುತ್ತಿದ್ದರು. ಅಂಬೇಡ್ಕರ್ ಅವರು 'ಹಿಂದೂಗಳೇ ನಮಗೆ ಕುಡಿಯಲು ನೀರು ಕೊಡಿ, ದೇವಸ್ಥಾನದ ಒಳಗಡೆ ಬಿಡಿ' ಎಂದು ಚಳುವಳಿ ಮಾಡುತ್ತಿದ್ದರು. ಗಾಂಧಿ ಅವರ ಸ್ವಾತಂತ್ರ್ಯ ಚಳವಳಿ ಇಂದು ಮುಗಿದ ಅಧ್ಯಾಯ. ಆದರೆ ಅಂಬೇಡ್ಕರ್ ಚಳುವಳಿ ಅಂತ್ಯವಿಲ್ಲದ ನಿರಂತರ ಹೋರಾಟವಾಗಿ, ಅಂಬೇಡ್ಕರ್ ಅವರ ಚಿಂತನೆಗಳು-ವಿಚಾರಗಳು ಯಾವತ್ತೂ ಶೋಷಿತ ಸಮಾಜಕ್ಕೆ ಆದರ್ಶವಾಗಿವೆ. ಇವರ ವಿಚಾರ, ಚಿಂತನೆಗಳಿಂದ ಪ್ರಭಾವಿತರಾಗಿ ಸಮಾನತೆಯ ಸಮಾಜಕ್ಕಾಗಿ ದುಡಿಯುತ್ತಿರುವ ಅನೇಕ ಸಮಾಜ ಚಿಂತಕರು ಇದ್ದಾರೆ.[೩]

**೫.೧. ಸಾಮಾಜಿಕ ಚಿಂತನೆಗಳು**

ಅನೇಕ ಚಿಂತಕರಲ್ಲಿ ಆರ್.ಚನ್ನಿಗರಾಮಯ್ಯನವರು ಸಹ ಒಬ್ಬರು. ಇವರು ದಲಿತರಲ್ಲಿ ಸ್ವಾಭಿಮಾನವನ್ನು, ಸ್ವಯಂಪ್ರಜ್ಞೆಯನ್ನು ಅನ್ಯಾಯದ ವಿರುದ್ಧ ಸೆಟೆದೇಳುವ ಬಂಡಾಯದ ಮನೋಭಾವವನ್ನು ಬೆಳೆಸಿದರು. ಸಮಾನತೆಯ ಸಮಾಜಕ್ಕಾಗಿ ಶ್ರಮಿಸಿದರು. ಯಾವಾಗಲೂ ದಲಿತರ, ಅಲ್ಪಸಂಖ್ಯಾತರ, ಹಿಂದುಳಿದವರ ಅಭಿವೃದ್ಧಿಯ ಬಗ್ಗೆ ಕಳಕಳಿಯಿಂದ ಚಿಂತಿಸಿ ಚಿಂತನೆಯನ್ನು ಅನುಷ್ಠಾನಗೊಳಿಸಿದ ಚನ್ನಿಗರಾಮಯ್ಯರವರು ದಲಿತರ ಉದ್ಧಾರಕ್ಕೆ ಕಾರಣರಾದರು. ಹಿಂದುಳಿದ ದಲಿತರ, ಅಲ್ಪಸಂಖ್ಯಾತ ವರ್ಗಗಳ ಅಭಿವೃದ್ಧಿಯಾಗದ ಹೊರತು ಈ ನಾಡು ಅಭಿವೃದ್ಧಿ ಹೊಂದಲು ಸಾಧ್ಯವಾಗಲಾರದು ಎಂದು ಚಿಂತಿಸುತ್ತಿದ್ದುದು ಗಮನಾರ್ಹ. ಸಮಾಜದಲ್ಲಿರುವ ಅನೇಕ ಅನಿಷ್ಟ ಪದ್ಧತಿಗಳು ತೊಲಗುವವರೆಗೂ ದಲಿತ ಸಮುದಾಯದ ಅಭಿವೃದ್ಧಿ ಸಾಧ್ಯವಿಲ್ಲ ಎಂದು ಚಿಂತಿಸತೊಡಗಿದ್ದರು. ಇವರು ಸಮಾಜವನ್ನು ಪರಿವರ್ತಿಸುವ ಕ್ರಾಂತಿಕಾರಕ ವಿಚಾರಧಾರೆಯನ್ನು ಹೊಂದಿದವರಾದ್ದರು. ಚನ್ನಿಗರಾಮಯ್ಯನವರು ಅಸ್ಪೃಶ್ಯತಾ ನಿರ್ಮೂಲನೆ, ದಲಿತರ ಅಭಿವೃದ್ಧಿ, ಸಾಮಾಜಿಕ ತಾರತಮ್ಯಗಳ ನಿವಾರಣೆ, ಆರ್ಥಿಕ ಸಮಾನತೆ, ಶಿಕ್ಷಣ, ಈ ಎಲ್ಲಾ ಕ್ಷೇತ್ರಗಳಲ್ಲಿಯೂ ಚಿಂತನೆ ನಡೆಸಿದರು.

ಹುಟ್ಟಿನಿಂದಲೇ ದಲಿತ ಕುಟುಂಬದಿಂದ ಬಂದ ಚನ್ನಿಗರಾಮಯ್ಯ ಅವರು ದಲಿತರ ಕಷ್ಟ ಸುಖಗಳು ಹಾಗೂ ಅಸ್ಪೃಶ್ಯ ಅಸಮಾನತೆಗಳನ್ನು ಕಂಡು ಬೆಳೆದ ವ್ಯಕ್ತಿಯಾಗಿದ್ದ ಕಾರಣ ಅಸ್ಪೃಶ್ಯತೆಯ ವಿರುದ್ಧ ಸಂಘರ್ಷ ಮಾಡಿ. ಯಾವ ರೀತಿ ತಮ್ಮ ಹಕ್ಕುಗಳನ್ನು ಪಡೆಯಬೇಕು ಎಂಬುದರ ಬಗ್ಗೆ ಸ್ಪಷ್ಟ ಅರಿವಿತ್ತು. ಮೌಢ್ಯತೆ, ಅಜ್ಞಾನದಲ್ಲಿರುವ ದಲಿತರನ್ನು ಕಂಡರೆ ಮರುಗುವ ಮನೋಧರ್ಮದವರಾಗಿದ್ದರು. ಚನ್ನಿಗರಾಮಯ್ಯನವರು ಶೋಷಣೆರಹಿತ ಮತ್ತು ಮಾನವೀಯತೆಯ ನೆಲೆಗಟ್ಟಿನ ಮೇಲೆ ನಿಂತ ಸಮಾಜವನ್ನು ನಿರ್ಮಾಣ ಮಾಡಲು ಅವಿರತ ಶ್ರಮ ವಹಿಸಿದರು. ಸಾಮಾಜಿಕ ಪಿಡುಗುಗಳ ವಿರುದ್ಧ ಸಮರ ಸಾರಿದ ಅಗ್ರಸ್ಥಾನ ಇವರಿಗೇ ಸಲ್ಲಬೇಕು. ಬಡವರ ಮತ್ತು ದಮನಕ್ಕೊಳಗಾದವರ ಆಶಾಕಿರಣವಾಗಿದ್ದರು. ಬಹುಮುಖ ವ್ಯಕ್ತಿತ್ವದ ಚನ್ನಿಗರಾಮಯ್ಯನವರು ಸ್ವಾತಂತ್ರ್ಯಹೋರಾಟಗಾರರು, ದಕ್ಷ ಆಡಳಿತಗಾರರು, ನುರಿತ ಭಾಷಣಕಾರರು, ವಿವೇಚನಾಶೀಲ ರಾಜಕೀಯ ಮುತ್ಸದ್ದಿ, ಶೋಷಿತ ಜನಪರವಾದ ನಾಯಕರು, ಎಲ್ಲಕ್ಕಿಂತ ಮುಖ್ಯವಾಗಿ ಒಬ್ಬ ಶ್ರೇಷ್ಠ ಮಾನವಜೀವಿ ಜೀವನದುದ್ದಕ್ಕೂ ದೀನ ದಲಿತರ, ಹಿಂದುಳಿದವರ ಬಗ್ಗೆ ನಿರ್ವಂಚನೆಗಳಿಲ್ಲದೆ ದುಡಿದವರು. ಸಾಮಾಜಿಕ ಪಿಡುಗುಗಳಾದ ಅಸ್ಪೃಶ್ಯತೆ ಪಾನನಿರೋಧ, ದೇವಾಲಯಗಳ ಪ್ರವೇಶ ನಿರಾಕರಣೆ ಮುಂತಾದ ಅನಿಷ್ಟ ಪದ್ಧತಿಗಳನ್ನು ಹೋಗಲಾಡಿಸಲು ಪ್ರಯತ್ನಿಸಿದರು.[೪]

೫.೧.೧. ಪಾನನಿರೋಧ

ಮತ್ತು ಬರಿಸುವ ವಸ್ತುಗಳು ಹಾಗೂ ಮಾದಕ ಪದಾರ್ಥಗಳು ಯಾವಾಗಲೂ ಸಮಾಜದ ಒಂದು ಪಿಡುಗಾಗಿರುತ್ತದೆ. ಅಲ್ಲದೆ ಬಡವರು ಮತ್ತು ದುರ್ಬಲ ವರ್ಗದವರು ಈ ಚಟಕ್ಕೆ ಬಲಿಯಾಗುತ್ತಾರೆ. ಪಾನನಿರೋಧದ ಸಮಸ್ಯೆಯು ಟಿಪ್ಪುಸುಲ್ತಾನನ ಕಾಲದಿಂದಲೂ ಇತ್ತು. ಟಿಪ್ಪು ತನ್ನ ರಾಜ್ಯಾದ್ಯಂತ ಸಾರಾಯಿ, ಮದ್ಯದ ಸೇವನೆ, ಗಾಂಜಾ, ಅಫೀಮುಗಳ ಮಾರಾಟವನ್ನು ನಿಷೇಧಿಸಿದನು. ಈ ಮದ್ಯಪಾನ ನಿಷೇಧವು ೧೭೮೮ರಿಂದ ೧೭೯೯ರವರೆಗೂ ಮೈಸೂರು ಸಂಸ್ಥಾನದಾದ್ಯಂತ ಜಾರಿಯಲ್ಲಿತ್ತು. ಸ್ವಾತಂತ್ರ್ಯ ಪೂರ್ವಕ್ಕೆ ಮುನ್ನ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ಇದರ ಪರಿಣಾಮಗಳನ್ನು ಗಮನ ಹರಿಸಿ ಇದರ ನಿರೋಧಕ್ಕೆ ಗಮನ ಹರಿಸಿತು.[೪] ೧೯೨೦ರ ದಶಕದಲ್ಲಿ ಪಾನನಿರೋಧ ಚಳುವಳಿಯ ಬಗ್ಗೆ ಅಸೆಂಬ್ಲಿ ಮತ್ತು ಕೌನ್ಸಿಲ್ ಸಭೆಗಳಲ್ಲಿ ಚರ್ಚೆಯು ನಡೆಯಿತು. ಸರ್ಕಾರಕ್ಕೆ ಸುಮಾರು ಎಪ್ಪತ್ತು ಲಕ್ಷ ರೂ.ಗಳ ಆದಾಯವು ಅಬಕಾರಿ ಸುಂಕದಿಂದ ಬರುತ್ತಿದ್ದರಿಂದ ಇದರ ಬಗ್ಗೆ ವಿರೋಧ ವ್ಯಕ್ತಪಡಿಸಲು ಸರ್ಕಾರ ಮುಂದಾಗಲಿಲ್ಲ. ಆದ್ದರಿಂದ ಅಕ್ಷರಸ್ಥರಿಂದ ಈ ಪಾನನಿರೋಧವನ್ನು ಕಡಿಮೆ ಮಾಡಲು ಪ್ರಯತ್ನಗಳು ನಡೆದವು. ಮೈಸೂರಿನ ದಿವಾನರಾದ ಸರ್.ಮಿರ್ಜಾಇಸ್ಮಾಯಿಲ್ ಅವರು 'ಜನತೆಯು ಕುಡಿಯುವುದನ್ನು ಬಿಡಲು ತಯಾರಿದ್ದಾರೆ. ಸರ್ಕಾರಕ್ಕೆ ಕೋಟಿ ರೂಪಾಯಿಗಳು ನಷ್ಟವಾದರೂ ಸಹಾ ಸಂಸ್ಥಾನದಲ್ಲಿ ಪಾನನಿರೋಧವನ್ನು ಜಾರಿಗೆ ತರಲು ಸಿದ್ಧ' ಎಂದು ತಮ್ಮ ಒಪ್ಪಿಗೆಯನ್ನು ಸೂಚಿಸಿದರು.[೫] ಮದ್ಯಪಾನ ವಿಷಯಕ್ಕೆ ಸಂಬಂಧಿಸಿದ ರಚನಾತ್ಮಕ ಕೆಲಸವನ್ನು ಸಂಸ್ಥಾನದ ವಿವಿಧ ವರ್ಗವು ಸಾಕಷ್ಟು ಪ್ರೋತ್ಸಾಹದಾಯಕವಾಗಿಯೇ ಸ್ವೀಕರಿಸಿತು. ಸಂಸ್ಥಾನದ ಕಾಂಗ್ರೆಸ್ ಕಾರ್ಯಕರ್ತರು ಸಹ ಈ ವಿಷಯದಲ್ಲಿ ಸ್ಪಷ್ಟ ಪ್ರತಿಕ್ರಿಯೆಗೆ ಒಳಗಾಗಿ ಖಾದಿ ಪ್ರಚಾರದ

ಜೊತೆಯಲ್ಲಿಯೇ ಪಾನನಿರೋಧದ ಬಗ್ಗೆ ಸಲಹೆಯನ್ನು ಜನರಿಗೆ ತಿಳಿಯಪಡಿಸುತ್ತಿದ್ದರು. ಸ್ತ್ರೀಯರು ಸಹ ಈ ಕಾರ್ಯದಲ್ಲಿ ಯಶಸ್ವಿಯಾಗಿ ಪಾಲ್ಗೊಂಡರು. ವಿದ್ಯಾರ್ಥಿ ಸಮುದಾಯವು ಪಾನನಿರೋಧದ ಅಂಗವಾಗಿ ಮದ್ಯ ಅಂಗಡಿಗಳ ಮುಂದೆ ಯಶಸ್ವಿ ಪಿಕೆಟಿಂಗ್ ಕಾರ್ಯಕ್ರಮಗಳನ್ನು ಸಹ ಹಮ್ಮಿಕೊಂಡಿತು. ಸಂಸ್ಥಾನದ ಸರಕಾರ ಮಾತ್ರ ಈ ವಿಷಯಕ್ಕೆ ಸಂಬಂಧಿಸಿದಂತೆ ಕೇವಲ ಪ್ರಯೋಗಾತ್ಮಕವಾಗಿ ಸ್ಪಂದಿಸಿತು. ಪಾನನಿರೋಧವು ಗಾಂಧೀಜಿಯವರ ರಚನಾತ್ಮಕ ಕಾರ್ಯಕ್ರಮಗಳಲ್ಲಿ ಒಂದಾಗಿದೆ. 'ಮದ್ಯಪಾನ ವ್ಯಸನಕ್ಕೆ ತುತ್ತಾದ ರಾಷ್ಟ್ರಕ್ಕೆ ಆತ್ಮನಾಶವಲ್ಲದೆ ಅನ್ಯಗತಿಯಿಲ್ಲ, ಮದ್ಯಪಾನವು ಕಳುವಿಗಿಂತ, ವ್ಯಭಿಚಾರಕ್ಕಿಂತಲೂ ಹೇಯವಾದದ್ದು. ಮಾದಕ ಪದಾರ್ಥಗಳ ದಾಸರಾದ ಜನತೆ ಪೂರ್ಣ ಸ್ವರಾಜ್ಯವನ್ನು ಎಂದಿಗೂ ಪಡೆಯಲಾರರು. ಹಿಂಸೆಯಿಂದ ಈ ಸುಧಾರಣೆ ಬರಲು ಸಾಧ್ಯವಿಲ್ಲ. ಶಾಶ್ವತ ಆತ್ಮಶ್ರದ್ಧೆ ಹಾಗೂ ಶುದ್ಧತೆಯಿಂದ ಮಾತ್ರ ಸಾಧ್ಯ' ಎಂದು 'ಮಾದಕ ಪದಾರ್ಥಗಳ ಬಲೆಯಲ್ಲಿ ಬಿದ್ದವನಲ್ಲಿ ಮನುಷ್ಯತ್ವ ನಷ್ಟವಾಗುತ್ತದೆಂಬುದು ಮರೆಯಬಾರದು, ಎಂದು ಗಾಂಧೀಜಿಯವರು ನವಭಾರತ ಪತ್ರಿಕೆಯಲ್ಲಿ ಬರೆದರು. 'ಬೆಂಕಿ ದೇಹವನ್ನು ಮಾತ್ರ ನಾಶ ಮಾಡಿದರೆ ಕುಡಿತ ದೇಹ ಮತ್ತು ಆತ್ಮ ಎರಡನ್ನು ನಾಶಮಾಡುವ ಅನಿಷ್ಟ ಶಕ್ತಿ.' ಆದುದರಿಂದ ಗಾಂಧೀಜಿಯವರು ಮದ್ಯದ ಅಂಗಡಿಗಳಿಗೆ ಬದಲಾಗಿ ಮಜ್ಜಿಗೆಯ ಅಂಗಡಿಗಳನ್ನು ತೆರಿಯಿರಿ ಎಂದು ಜನತೆಗೆ ಕರೆ ನೀಡಿದ್ದರು. ಮಹಾತ್ಮಗಾಂಧೀಜಿಯವರು ಮದ್ಯಪಾನ ಸೇವನೆಯ ಕಡು ವಿರೋಧಿಯಾಗಿದ್ದರು. ಭವ್ಯ ಸಂಸ್ಕೃತಿಯ ನಾಡಾದ ಭಾರತದಲ್ಲಿ ಮಾದಕ ಪದಾರ್ಥಗಳಿಗೆ ಅವಕಾಶವಿರಕೂಡದು. ಹರಿಜನಾಭಿವೃದ್ಧಿಯಾಗಬೇಕಾದರೆ, ಉತ್ತಮ ನಾಗರಿಕ ಸಾಂಸಾರಿಕ ವಾತಾವರಣವಿರಬೇಕಾದರೆ, ಬೆಳೆಯುತ್ತಿರುವ ಮಕ್ಕಳ ಗುಣ ಉತ್ಕೃಷ್ಟ ರೂಪ ಪಡೆಯಬೇಕಾದರೆ ಪಾನ ನಿರೋಧವನ್ನು ಕಡ್ಡಾಯವಾಗಿ ಜಾರಿಗೊಳಿಸಬೇಕು ಎಂಬುದು ಗಾಂಧೀಜಿಯವರ ಅಭಿಪ್ರಾಯವಾಗಿತ್ತು. ಆದುದರಿಂದಾಗಿ ಪಾನನಿರೋಧವನ್ನು ತಮ್ಮ ರಚನಾತ್ಮಕ ಕಾರ್ಯಕ್ರಗಳಲ್ಲಿ ಒಂದಾಗಿ ಹಮ್ಮಿಕೊಂಡಿದ್ದರು. ಅಲ್ಲದೇ ರಾಷ್ಟ್ರೀಯ ಚಳುವಳಿಯ ಜೊತೆಯಲ್ಲಿಯೇ ಪಾನನಿರೋಧ ಚಳುವಳಿಯನ್ನು ಭಾರತದಾದ್ಯಂತ ಹಮ್ಮಿಕೊಂಡರು. ಇದರಿಂದಾಗಿ ಸ್ಫೂರ್ತಿ ಪಡೆದ ಕಾಂಗ್ರೆಸ್ ಕಾರ್ಯಕರ್ತರು ಈ ಚಳುವಳಿಯಲ್ಲಿ ಸಕ್ರಿಯವಾಗಿ ಪಾಲ್ಗೊಂಡು ಯಶಸ್ವಿಗೊಳಿಸಿದರು. ಇದೇ ರೀತಿಯಾಗಿ ತುಮಕೂರು ಜಿಲ್ಲೆಯ ಕಾಂಗ್ರೆಸ್ ಕಾರ್ಯಕರ್ತರು ಖಾದಿ ಪ್ರಚಾರದ ಜೊತೆಯಲ್ಲಿಯೇ ಪಾನನಿರೋಧ ಚಳುವಳಿಯನ್ನು ಕೈಗೊಂಡು ಯಶಸ್ವಿಗೊಳಿಸಿದರು.[೬] ಮೈಸೂರು ಸಂಸ್ಥಾನದಲ್ಲಿಯೇ ಮೊದಲ ಬಾರಿಗೆ ಪಾನನಿರೋಧ ಚಳುವಳಿಯು ೧೯೩೧-೩೨ರಲ್ಲಿ ತುಮಕೂರು ಜಿಲ್ಲೆಯಲ್ಲಿ ಪ್ರಾರಂಭವಾಯಿತು. ಈ ಚಳುವಳಿಯನ್ನು ತುಮಕೂರಿಗೆ ಮೂರು ಮೈಲಿ ದೂರದ ಮಧುಗಿರಿ ರಸ್ತೆಯಲ್ಲಿರುವ ಯಲ್ಲಾಪುರದ ಹೆಂಡದ ಅಂಗಡಿಯ ಮುಂದೆ ಪಿಕೆಟಿಂಗ್ ನಡೆಸುವುದರ ಮೂಲಕ ಕೆ.ರಂಗಯ್ಯಂಗಾರ್, ಟಿ.ಸುಬ್ರಮಣ್ಯ, ಎಂ.ಎನ್.ವಿಠೋಬರಾವ್, ಎಂ.ರೇವಣ್ಣ, ಟಿ.ಎಲ್.ಸಂಗಣ್ಣನವರು ಪ್ರಾರಂಭಿಸಿದರು. ದಿನಕ್ಕೆ ನಾಲ್ಕು ಸತ್ಯಾಗ್ರಹಿಗಳಂತೆ ಸುಮಾರು ೧೨೦ ಜನರು ಈ ಪಿಕೆಟಿಂಗ್‌ನಲ್ಲಿ ಭಾಗವಹಿಸಿದ್ದರು. ತುಮಕೂರು ಜಿಲ್ಲೆಯ ಕಾಂಗ್ರೆಸ್ ಮುಖಂಡರು ಕಾಂಗ್ರೆಸ್ ಸಭೆಗಳನ್ನು ಏರ್ಪಡಿಸಿ ಪ್ರತಿಯೊಂದು ಸಭೆಯಲ್ಲಿ ಪಾನನಿರೋಧದ ಬಗ್ಗೆ ಮಾತನಾಡಿ ಜನತೆಗೆ ಅದರಿಂದಾಗುವ ಕೆಟ್ಟ ಪರಿಣಾಮಗ ಬಗ್ಗೆ ಅರಿವು ಮೂಡಿಸುತ್ತಿದ್ದರು. ೧೯೩೧ರಲ್ಲಿ ಸ್ವಾತಂತ್ರ್ಯ ಚಳುವಳಿಗೆ

ಧುಮುಕಿದ ಚನ್ನಿಗರಾಮಯ್ಯನವರು ಹಲವಾರು ಚಳುವಳಿಗಳಲ್ಲಿ ಭಾಗವಹಿಸುವ ಮೂಲಕ ಪಾನ ನಿರೋಧಕ್ಕೆ ತಮ್ಮ ಬೆಂಬಲವನ್ನು ಸೂಚಿಸಿದರು. ೧೯೩೮ರಲ್ಲಿ ತುಮಕೂರು ನಗರದ ಕಾಂಗ್ರೆಸ್ ಸಮಿತಿಯು ಸುನಂದಾ ದೇವಿಯವರಿಂದ ಭಾಷಣವನ್ನು ಹಮ್ಮಿಕೊಂಡಿತ್ತು. ಈ ಸಭೆಯಲ್ಲಿ ಸುನಾಂದಾ ದೇವಿಯವರು ಸಭೆಯನ್ನು ಕುರಿತು ಮಾತನಾಡುತ್ತ 'ಪ್ರತಿಯೊಂದು ಹಳ್ಳಿಯಲ್ಲಿ ಒಂದೊಂದು ಮದ್ಯದ ಅಂಗಡಿಗಳಿವೆ. ಆದರೆ ಹಳ್ಳಿಗೊಂದು ಶಾಲೆಯಿಲ್ಲ' ಎಂದು ಸರ್ಕಾರವನ್ನು ಟೀಕಿಸಿ ಶಿಕ್ಷಣದ ಮಹತ್ವವನ್ನು ತಿಳಿಸಿ ಪಾನ ನಿರೋಧ ಕೈಗೊಳ್ಳಬೇಕೆಂದು ಪರೋಕ್ಷವಾಗಿ ತಿಳಿಸಿದರು.[೬] ಮೈಸೂರು ಕಾಂಗ್ರೆಸ್ ಸಪ್ತಾಹದ ಕಾರ್ಯಕ್ರಮಗಳಲ್ಲಿ ಪಾನನಿರೋಧವು ಒಂದಾಗಿದ್ದು ಅದರಂತೆ ತುಮಕೂರು ಜಿಲ್ಲೆಯ ಕಾಂಗ್ರೆಸ್ ಸಮಿತಿಯೂ ಕಾಂಗ್ರೆಸ್ ಸಪ್ತಾಹದ ಕಾರ್ಯಕ್ರಮಗಳನ್ನು ಹಮ್ಮಿಕೊಂಡಾಗ ೨೨ ಮೇ ೧೯೩೯ರಂದು ಪಾನನಿರೋಧ ದಿನವನ್ನು ಆಚರಿಸಿತು. ಈ ಸಪ್ತಾಹದ ಕಾರ್ಯಕ್ರಮದ ಅಂಗವಾಗಿ ಜಿಲ್ಲೆಯ ನಾಯಕರಾದ ಸಿ.ಟಿ.ಹನುಮಂತಯ್ಯ, ಆರ್.ಚನ್ನಿಗರಾಮಯ್ಯ ಮುಂತಾದವರು ದಲಿತರ ಕೇರಿಗಳಿಗೆ ಭೇಟಿ ನೀಡಿ ಮೈಸೂರು ಕಾಂಗ್ರೆಸ್ ಸಪ್ತಾಹದ ವಿವರಗಳನ್ನು ಶ್ರದ್ಧಾಸಕ್ತಿಯಿಂದ ವಿವರಿಸಿ, ಪಾನನಿರೋಧಕ್ಕೆ ದಲಿತರು ಸಹಕರಿಸುವಂತೆ ಕೋರಿ, ಕೆಲವೆಡೆ ಅವರಿಂದ 'ಮದ್ಯಪಾನ ಮಾಡುವುದಿಲ್ಲ' ಎಂದು ಪ್ರತಿಜ್ಞೆಯನ್ನು ಮಾಡಿಸಿದ್ದರು. ಇದೇ ಸಮಯದಲ್ಲಿ ತುಮಕೂರು ಮತ್ತು ಕ್ಯಾತ್ಸಂದ್ರದಲ್ಲಿ ಸೇಂದಿ ಅಂಗಡಿಗಳ ಮುಂದೆ ಪಿಕೆಟಿಂಗ್ ಯಶಸ್ವಿಯಾಗಿ ನಡೆಯಿತು. ಮೈಸೂರು ಸಂಸ್ಥಾನದ ಸರ್ಕಾರ ಪಾನನಿರೋಧವನ್ನು ಜಾರಿಗೆ ತರಲು ಅಸಮರ್ಥವಾಗಿದೆಯೆಂದು ಮೈಸೂರು ಕಾಂಗ್ರೆಸ್ ತೀರ್ಮಾನಿಸಿ ಪ್ರಪ್ರಥಮವಾಗಿ ಚಿತ್ರದುರ್ಗ ಜಿಲ್ಲೆಯ ತುರುವನೂರಿನಲ್ಲಿ ಅರಣ್ಯ ಸತ್ಯಾಗ್ರಹವು ಕಾಂಗ್ರೆಸ್ ನಾಯಕರ ನಾಯಕತ್ವದಲ್ಲಿ ಪ್ರಾರಂಭವಾಯಿತು.[೭] ತದ ನಂತರ ಇತಿಹಾಸ ಪ್ರಸಿದ್ಧ ಅರಣ್ಯ ಸತ್ಯಾಗ್ರಹವು ಶ್ರೀಯುತ ಮಾಲಿಮರಿಯಪ್ಪನವರ ನೇತೃತ್ವದಲ್ಲಿ ತುಮಕೂರು ಜಿಲ್ಲೆಯ ಶಿರಾ ತಾಲ್ಲೂಕಿನಲ್ಲಿ ನಡೆಯಿತು. ೧೯೪೨ರ ಕ್ವಿಟ್ ಇಂಡಿಯಾ ಚಳುವಳಿ ಮತ್ತು ೧೯೪೭ರ ಮೈಸೂರು ಚಲೋ ಚಳುವಳಿಯ ಸಂದರ್ಭದಲ್ಲಿ ಪಾನನಿರೋಧದ ಚಳುವಳಿಗಳು ಅವ್ಯಾಹತವಾಗಿ ಕಂಡುಬಂದವು. ಈ ಚಳುವಳಿಯ ಸಂದರ್ಭದಲ್ಲಿ ತುಮಕೂರು ಜಿಲ್ಲೆಯ ಮಧುಗಿರಿ, ಕೊರಟಗೆರೆ, ಶಿರ, ತಿಪಟೂರು, ಪಾವಗಡ, ಕುಣಿಗಲ್ಲು ಚಿಕ್ಕನಾಯಕನಹಳ್ಳಿ ಮುಂತಾದ ಕಡೆಗಳಲ್ಲಿ ಪಾನನಿರೋಧದ ಚಳುವಳಿಗಳು ಬಹಳ ಬಿರುಸಿನಿಂದ ಸಾಗಿದವು. ಅದೇ ರೀತಿಯಾಗಿ ಮೈಸೂರು ಚಲೋ ಚಳುವಳಿಯ ಸಂದರ್ಭದಲ್ಲಿಯೂ ಸಹ ತುಮಕೂರು ಜಿಲ್ಲೆಯಾದ್ಯಂತ ಪಾನನಿರೋಧ ಚಳುವಳಿಯು ಬಹಳ ಬಿರುಸಿನಿಂದ ನಡೆದು ಯಶಸ್ವಿಯಾಯಿತು. ಈ ಎರಡು ಚಳುವಳಿಯಲ್ಲಿ ಚನ್ನಿಗರಾಮಯ್ಯನವರು ಸಕ್ರಿಯವಾಗಿ ಭಾಗವಹಿಸಿ ಪಾನನಿರೋಧವನ್ನು ನಿಷೇಧಿಸುವಂತೆ ಸರ್ಕಾರದ ಮೇಲೆ ಒತ್ತಡ ತಂದರು. ಕೆಳವರ್ಗದವರು ಹೆಚ್ಚಾಗಿ ಮದ್ಯವ್ಯಸನಿಗಳಾಗಿದ್ದು, ಇದರಿಂದಾಗಿ ಅವರ ಅಭಿವೃದ್ಧಿ ಕುಂಠಿತವಾಗಿದೆ. ಆದ್ದರಿಂದ ಮದ್ಯಪಾನವನ್ನು ತ್ಯಜಿಸಿ ಉತ್ತಮ ಜೀವನ ನಡೆಸುವಂತೆ ತಿಳಿಸುತ್ತಿದ್ದರು. ಮದ್ಯಪಾನದಿಂದಾಗುವ ಅನಾನುಕೂಲ, ಅನಹುತಗಳನ್ನು ಹಾಗೂ ಪಾನ ನಿರೋಧದಿಂದಾಗುವ ಅನುಕೂಲಗಳನ್ನು ಜನತೆಗೆ ವಿವರಿಸುತ್ತಿದ್ದರು. ಇದರಿಂದ ದೂರ ಉಳಿಯುವಂತೆ ಮನವಿ ಮಾಡುತ್ತಿದ್ದರು.[೮]

### ೫.೧.೨. ದೇವಾಲಯ ಪ್ರವೇಶ

ಭಾರತದ ಸಾಮಾಜಿಕ ಪದ್ಧತಿಯ ಪ್ರಧಾನ ಲಕ್ಷಣ ಜಾತಿ. ಇದು ಸಾಮಾಜಿಕ ವ್ಯವಸ್ಥೆಗೆ ಅಡಿಪಾಯವಷ್ಟೇ ಅಲ್ಲ, ಸಾಮಾಜಿಕ ಸಂಸ್ಥೆಯಾಗಿ ಬಲಗೊಂಡು ಪ್ರಾಚೀನ ಕಾಲದಿಂದ ಇಂದಿನ ಆಧುನಿಕ ಕಾಲದವರೆಗೂ ಮುಂದುವರೆಯುತ್ತಿದೆ. ಜಾತಿ ಎಂದರೆ ಆಳುವ ವರ್ಗಗಳ ಶ್ರಮ. ಶೋಷಣೆಗೆ ನಿರ್ಮಿಸಿಕೊಂಡ ಕೆಟ್ಟ ವ್ಯವಸ್ಥೆ. ಭಾರತದ ಸಾಮಾಜಿಕ ವ್ಯವಸ್ಥೆಯಲ್ಲಿ ಜಾತಿ ಪ್ರಾಚೀನಕಾಲದಿಂದ ಇಂದಿನ ಆಧುನಿಕ ಕಾಲದವರೆಗೂ ದುಡಿಯುವ ಸಮೂಹಗಳನ್ನು ಶೋಷಿಸುವ ಹಾಗೂ ದಮನಿಸುವ ವಿಧಾನಗಳಲ್ಲಿ ಪ್ರಧಾನ ಪಾತ್ರ ವಹಿಸುತ್ತವೆ.[೧೦] ಹಿಂದೂ ಸಾಮಾಜಿಕ ವ್ಯವಸ್ಥೆಯಲ್ಲಿ ಅತ್ಯಂತ ಕೆಳಸ್ತರದಲ್ಲಿರುವವರೇ ಅಸ್ಪೃಶ್ಯರು. ಸಾವಿರಾರು ವರ್ಷಗಳಿಂದಲೂ ಈ ಸಮುದಾಯಗಳು ಹಿಂದೂ ಸವರ್ಣೀಯರಿಂದ ಅಸ್ಪೃಶ್ಯರೆಂದು ಪರಿಗಣಿಸಲ್ಪಟ್ಟಿವೆ. ಇವರು ಹಿಂದೂ ಸವರ್ಣೀಯರ ಪಾಲಿಗೆ ಅತಿ ಅಪವಿತ್ರ. ಇವರನ್ನು ಸ್ಪರ್ಶಿಸಕೂಡದು, ನೋಡಕೂಡದು. ಈ ಅಸ್ಪೃಶ್ಯರು ಸಾರ್ವಜನಿಕ ಕೆರೆ ಬಾವಿಯ ನೀರನ್ನು ಉಪಯೋಗಿಸುವಂತಿರಲಿಲ್ಲ. ಇಂತಹ ಸಮಸ್ಯೆಗಳನ್ನು ಅಮಾನವೀಯ ಆಚರಣೆಗಳನ್ನು ದಲಿತರು ಅನುಭವಿಸುತ್ತಿದ್ದಾರೆ. ನಿಜಾರ್ಥದಲ್ಲಿ ಅಸ್ಪೃಶ್ಯಲೋಕ ಕಣ್ಣಳತೆಗೂ ಮೀರಿದ್ದು.[೧೧] ಮೊದಲೇ ಹೇಳಿದ ಹಾಗೆ ಅಸ್ಪೃಶ್ಯತೆಯ ಸ್ವರೂಪ ಆಧುನಿಕ ಪ್ರಕ್ರಿಯೆಗಳೊಂದಿಗೆ ಅನೇಕ ಮಾಯಾರೂಪಗಳನ್ನು ತಾಳುತ್ತ ಸಂಕೀರ್ಣಗೊಂಡಿದೆ. ಇಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ ೨೦ನೆ ಯ ಶತಮಾನದ ಮಹಾನ್ ಹೋರಾಟಗಾರರಾದ ಬಾಬಾಸಾಹೇಬ್ ಅಂಬೇಡ್ಕರ್ ಜೀವನದ ಉದ್ದಕ್ಕೂ ದಮನಕಾರಿ ಹಿಂದೂ ಸಂಸ್ಕೃತಿ ವ್ಯವಸ್ಥೆ ಮತ್ತು ಸಿದ್ಧಾಂತದ ವಿರುದ್ಧ ಸಮರವನ್ನು ಸಾರಿದರು. ಅವರು ಕ್ರಾಂತಿಯ ಸಂಕೇತ. ಯಾವ ಹಿಂದೂ ಧರ್ಮವು ದಲಿತರನ್ನು ಶತಮಾನಗಳ ದಾರಿದ್ರ್ಯ, ಶೋಷಣೆ ಮತ್ತು ದಬ್ಬಾಳಿಕೆಗಳಿಗೆ ಒಳಪಡಿಸಿತ್ತು ಅಂಥವರ ಬಾಳಿನಲ್ಲಿ ಆಶಾಕಿರಣವಾಗಿ, ಅವರ ಶಕ್ತಿಯಾಗಿ ಭಾರತದ ಇತಿಹಾಸದಲ್ಲಿ ಧೂಮಕೇತುವಿನಂತೆ ಉದಯಿಸಿ, ಅಸ್ಪೃಶ್ಯರ ಬಾಳಿನ ಅರುಣೋದಯವಾದರು. ಇಂದು ಅಂಬೇಡ್ಕರ್ ಅವರ ಹೆಸರು ಶೋಷಕರ ಎದೆಯಲ್ಲಿ ಬಾಂಬ್ ಸಿಡಿದಂತೆ ಹಾಗೂ ದೀನ ದಲಿತರ ಮನದಲ್ಲಿ ಕರುಣೆ ಹಾಗೂ ಮಾನವೀಯತೆಯ ಬುಗ್ಗೆಯೊಡೆದಂತೆ ಕಂಡುಬಂದಿದೆ. ಮನುಷ್ಯ ಮನುಷ್ಯರಲ್ಲಿನ ಅಮಾನವೀಯ ವರ್ತನೆ ಮತ್ತು ಬಲಿಷ್ಠರು ಅಬಲರನ್ನು ಶೋಷಿಸುವುದನ್ನು ಅವರು ತೀವ್ರವಾಗಿ ಖಂಡಿಸಿದರು. ಈ ಕೆಟ್ಟ ಪರಂಪರೆಯ ನಾಶಕ್ಕಾಗಿ ಜೀವನದುದ್ದಕ್ಕೂ ದೊಡ್ಡ ಹೋರಾಟವನ್ನು ಮಾಡಿದರು. ದಲಿತೋದ್ಧಾರಕ್ಕೆ ಅವರು ತಮ್ಮನ್ನು ಹಚ್ಚಿಕೊಂಡಿದ್ದ ರೀತಿ ಮನಸ್ಸಿಗೆ ನಾಟುವಂತಾದ್ದು.[೧೨] ಇಂತಹ ಅಂಬೇಡ್ಕರ್ ಅವರ ಚಿಂತನೆಗಳು, ಅಸ್ಪೃಶ್ಯರ ಬಗೆಗೆ ಇದ್ದ ಕಾಳಜಿ ಈ ಎಲ್ಲಾ ಅಂಶಗಳಿಂದ ಚನ್ನಿಗರಾಮಯ್ಯನವರು ಪ್ರಭಾವಿತರಾಗಿ ದಲಿತರ ಏಳಿಗೆ, ಅಭಿವೃದ್ಧಿ ಕಾಳಜಿಯ ಬಗ್ಗೆ ಚಿಂತಿಸುವಂತಾಯಿತು. ಗಾಂಧೀಜಿಯವರ ರಚನಾತ್ಮಕ ಕಾರ್ಯಗಳಲ್ಲಿ ಒಂದಾದ ಅಸ್ಪೃಶ್ಯತಾ ನಿವಾರಣೆ ಹೆಚ್ಚು ಪರಿಣಾಮ ಬೀರಿದವು. ೧೯೨೭ರಲ್ಲಿ ಗಾಂಧೀಜಿ ತುಮಕೂರಿಗೆ ಭೇಟಿ ನೀಡಿ, ಅಂದಿನ ಸಾರ್ವಜನಿಕ ಸಭೆಯ ನಂತರ ಹರಿಜನರು ವಾಸಿಸುವ ಕೇರಿಗಳಿಗೆ ಭೇಟಿ ನೀಡಿ ಅವರಿಗೆ ಸ್ವಚ್ಛತೆಯಿಂದ ಇರಬೇಕು, ಹೆಂಡ ಕುಡಿಯುವುದನ್ನು

ನಿಲ್ಲಿಸಬೇಕು ಮತ್ತು ಗೋಮಾಂಸ ತಿನ್ನುವುದನ್ನು ಬಿಟ್ಟು ಬಿಡಬೇಕು ಎಂದು ಹರಿಜನರನ್ನು ಕುರಿತು ಭಾಷಣ ಮಾಡಿದರು. ಇಂತಹ ಗಾಂಧೀಜಿಯವರ ಚಿಂತನೆಗಳು ವಿಚಾರಧಾರೆಗಳು ಚನ್ನಿಗರಾಮಯ್ಯನವರಿಗೆ ಹೆಚ್ಚು ಪ್ರಭಾವ ಬೀರಿ ಅಸ್ಪೃಶ್ಯತೆಯನ್ನು ನಿವಾರಿಸುವ ಕಾರ್ಯದಲ್ಲಿ ತೊಡಗಿಕೊಂಡರು. ಅಸ್ಪೃಶ್ಯತೆ ಮಾನವ ಜನಾಂಗಕ್ಕೆ ಒಂದು ಪಾಪಪೂರಿತ ಶಾಪ. ಮಾನವ ಎಂದಿನವರೆಗೆ ಮಾನವೀಯತೆಯನ್ನು ಮರೆತು ಈ ಪಾಪವನ್ನು ಮುಂದುವರೆಸುತ್ತಾನೋ ಅಂದಿನವರೆಗೂ ನಾವು ಸ್ವತಂತ್ರರಾಗಿಯೂ ಪರತಂತ್ರರು ಎಂಬುದನ್ನು ಮನಗಂಡ ಚನ್ನಿಗರಾಮಯ್ಯನವರು ಅಸ್ಪೃಶ್ಯತಾ ನಿವಾರಣೆಗಾಗಿ ಹಲವು ಕಾರ್ಯಕ್ರಮಗಳನ್ನು ರೂಪಿಸಿದರು. ತುಮಕೂರು ಜಿಲ್ಲೆಯ ನಾಯಕರು ದಲಿತೋದ್ಧಾರದ ಬಗ್ಗೆ ಬಹಳ ಕಾಳಜಿಯನ್ನು ಹೊಂದಿದ್ದರು. ಮಾಲಿಮರಿಯಪ್ಪ, ಕೆ.ಹೆಂಜೀರಪ್ಪ, ಆರ್.ಚನ್ನಿಗರಾಮಯ್ಯ, ಸಿ.ಟಿ.ಹನುಮಂತಯ್ಯ ಮುಂತಾದ ನಾಯಕರು ಸಂಸ್ಥಾನದ ಹಲವಾರು ನಾಯಕರನ್ನು ಆಹ್ವಾನಿಸಿ ಉಪನ್ಯಾಸಗಳನ್ನು ಏರ್ಪಡಿಸುತ್ತಿದ್ದರು. ಇದರಿಂದಾಗಿ ಜನತೆಗೆ ಹರಿಜನೋದ್ಧಾರದ ಬಗ್ಗೆ ತಿಳುವಳಿಕೆಯನ್ನು ಮೂಡಿಸುತ್ತಿದ್ದರು. ಜಿಲ್ಲೆಯ ಸಿ.ಟಿ.ಹನುಮಂತಯ್ಯನವರು ದಲಿತರಿಗೆ ಸಾರ್ವಜನಿಕ ಬಾವಿ, ಕೆರೆ, ಹೊಟೇಲುಗಳಿಗೆ ಮುಕ್ತವಾದ ಪ್ರವೇಶಕ್ಕೆ ಹೋರಾಟ ನಡೆಸಿದರು. ದೇವಸ್ಥಾನಗಳಿಗೆ ದಲಿತರ ಪ್ರವೇಶದ ಬಗ್ಗೆ ಹೆಚ್ಚಿನ ಮುತುವರ್ಜಿ ವಹಿಸಿದ್ದ ಆರ್.ಚನ್ನಿಗರಾಮಯ್ಯ ಹಾಗೂ ಸಿ.ಟಿ.ಹನುಮಂತಯ್ಯ ಅವರು ದೇವಸ್ಥಾನ ಶ್ರಮಿಕ ವರ್ಗದವರಿಂದ ನಿರ್ಮಾಣವಾಗುತ್ತೆ. ಆದರೆ ದೇವಾಲಯಗಳಿಗೆ ಶ್ರಮಿಕರಿಗೆ ಪ್ರವೇಶ ನಿರಾಕರಿಸಲಾಗುತ್ತೆ. ದೇವಾಲಯಗಳನ್ನು ಶುದ್ಧೀಕರಿಸುತ್ತಾರೆ. ವಿಗ್ರಹ ಪೂಜಾರಿಯ ಸೊತ್ತಾಗುತ್ತೆ. ಗುಡಿ ಕಟ್ಟುವಾಗ, ಪ್ರತಿಮೆ ಕೆತ್ತುವಾಗ ಇಲ್ಲದ ಪೂಜಾರಿ ಹತ್ತಿರವಾಗುತ್ತಾನೆ. ಗುಡಿ ಗೋಪುರ, ವಿಗ್ರಹ ಮಾಡಿದ ಶ್ರಮಿಕರು ದೂರವಾಗುತ್ತಾರೆ. ಮೈಲಿಗೆ ಎಂಬ ಭಯ ಹುಟ್ಟಿಸುತ್ತಾರೆ. ಈ ರೀತಿ ದೇಶದಲ್ಲಿ ಹಿಂದುಗಳು ದಲಿತರನ್ನು ವಂಚಿಸುತ್ತಲೇ ಬಂದಿದ್ದಾರೆ ಎಂದು ಹಲವಾರು ದೇವಾಲಯಗಳನ್ನು ಪ್ರವೇಶಿಸಿದರು. ಚನ್ನಿಗರಾಮಯ್ಯ ಹಾಗೂ ಸಿ.ಟಿ.ಹನುಮಂತಯ್ಯನವರು ದಲಿತರೊಂದಿಗೆ ನರಸಿಂಹಸ್ವಾಮಿ ದೇವಾಲಯವನ್ನು ಪ್ರವೇಶಿಸಿದರು. ನಂತರ ಗುಬ್ಬಿಯಪ್ಪನ ದೇವಾಲಯ, ಬ್ಯಾಲ ಹನುಮಂತರಾಯನ ದೇವಾಲಯ, ಗೂಳೂರು ವಿನಾಯಕ ದೇವಾಲಯಗಳನ್ನು ಪ್ರವೇಶಿಸಿದರು.[೧೩] ಇವರು ಶೋಷಿತರನ್ನು ಸಂಘಟಿಸಿ ಅವರಲ್ಲಿ ಅರಿವನ್ನು ಮೂಡಿಸಲು ಪ್ರಯತ್ನಿಸುತ್ತಿದ್ದರು. ಚನ್ನಿಗರಾಮಯ್ಯನವರು ಕೆ.ಸಿ.ರೆಡ್ಡಿ ಸಂಪುಟದಲ್ಲಿ ಮಂತ್ರಿಯಾಗಿದ್ದಾಗ ಮೈಸೂರಿನಲ್ಲಿ ಅಸೆಂಬ್ಲಿ ನಡೆಯುತ್ತಿದ್ದ ಸಂದರ್ಭದಲ್ಲಿ ಇವರ ಕುಟುಂಬದವರು ಚಾಮುಂಡಿ ದೇವಿಯ ದರ್ಶನಕ್ಕೆ ಹೋದರು. ದೇವಸ್ಥಾನದ ಮುಂದೆ ಹೋಗುತ್ತಿದ್ದಂತೆ ದೇವಸ್ಥಾನ ಬಾಗಿಲು ಹಾಕಿದರು. ಎಷ್ಟೇ ಕೇಳಿಕೊಂಡರೂ ಒಳಗೆ ಪ್ರವೇಶ ನಿರಾಕರಿಸಿದರು. ಆಗ ನೊಂದ ಮನಸ್ಸಿನಿಂದ ಬಾಗಿಲಿನಲ್ಲೇ ದೇವಿಗೆ ನಮಸ್ಕಾರ ಮಾಡಿ ಹಿಂತಿರುಗಿದರು. ನಂತರ ಚನ್ನಿಗರಾಮಯ್ಯನವರಿಗೆ ನಡೆದ ಸಂಗತಿ ತಿಳಿದ ಕೂಡಲೇ ಮುಖ್ಯಮಂತ್ರಿ ಕೆ.ಸಿ.ರೆಡ್ಡಿಯವರಿಗೆ ನಾನು ಮಂತ್ರಿ ಪದವಿಗೆ ರಾಜೀನಾಮೆ ನೀಡುತ್ತಿದ್ದೇನೆ. ಏಕೆಂದರೆ ಇಂದು ನನ್ನ ಕುಟುಂಬದವರಿಗೆ ಚಾಮುಂಡಿ ದೇವಿಯ ದೇವಸ್ಥಾನದಲ್ಲಿ ದರ್ಶನ ಮಾಡಲು ಅವಕಾಶ ನೀಡಿರುವುದಿಲ್ಲ. ದಲಿತರಿಗೆ ದೇವಸ್ಥಾನಕ್ಕೆ ಪ್ರವೇಶವಿಲ್ಲ ಎನ್ನುವ ಅನಿಷ್ಟ ಪದ್ಧತಿಯನ್ನು

ಅನುಸರಿಸುತ್ತಿದ್ದಾರೆ. ಇದರಿಂದಾಗಿ ಅವಮಾನವಾಗಿದೆ. ನಾನು ದಲಿತರ ಪರವಾಗಿ ಮಂತ್ರಿಯಾಗಿ ಇರುವುದಕ್ಕೆ ಇಷ್ಟವಿಲ್ಲ. ನಾನು ಮಂತ್ರಿಯಾಗಿದ್ದರೂ ಸಹ ಅನಿಷ್ಟ ಆಚರಣಗಳನ್ನು ಅನುಭವಿಸಬೇಕಾಯಿತು. ಇನ್ನು ಸಾಮಾನ್ಯ ದಲಿತ ಸಮುದಾಯಗಳ ಪರಿಸ್ಥಿತಿಯನ್ನು ಊಹಿಸಿಕೊಳ್ಳುವುದು ಅಸಾಧ್ಯವಾಗಿದೆ. ಇಂತಹ ಪರಿಸ್ಥಿತಿಯಲ್ಲಿ ನಮ್ಮ ಸಮುದಾಯವನ್ನು ನಾನು ಹೇಗೆ ರಕ್ಷಿಸಬಲ್ಲೆ? ನಮ್ಮ ಜನರ ಪರವಾಗಿ ಅಧಿಕಾರಕ್ಕೆ ಬಂದಿದ್ದೇನೆ. ಅವರಿಗೋಸ್ಕರ ದುಡಿಯುತ್ತೇನೆ. ಈ ಅಧಿಕಾರ ಬೇಡ ಎಂದು ಹೇಳಿದರು. ಅದಕ್ಕೆ ಮುಖ್ಯಮಂತ್ರಿ ಕೆ.ಸಿ.ರೆಡ್ಡಿಯವರು ಸಮಾಧಾನ ಮಾಡಿ ಮಹಾರಾಜರಿಗೆ ಸುದ್ದಿ ತಿಳಿಸಿದರು. ಅಂದಿನ ಮಧ್ಯಾಹ್ನದ ಅಧಿವೇಶನದಲ್ಲಿ ಈ ವಿಷಯ ಚರ್ಚೆಯಾಗಿ ಕೊನೆಯಲ್ಲಿ ಚನ್ನಿಗರಾಮಯ್ಯನವರು ಖಂಡಿತ ರಾಜೀನಾಮೆ ನೀಡಬಾರದು ಎಂದು ಮಹಾರಾಜರು ಮನವೊಲಿಸಿದರು. ಆಗ ಮಾರನೆಯ ದಿನ ಬೆಳಗ್ಗೆ ಚೆನ್ನಿಗರಾಮಯ್ಯ ಮತ್ತು ಕುಟುಂಬವರ್ಗದವರು ಬೆಳಗ್ಗೆ ಮೊದಲ ಪೂಜೆಗೆ ಹೋಗುವಂತೆ ತಿಳಿಸಿದರು. ಅದಕ್ಕೆ ಚನ್ನಿಗರಾಮಯ್ಯನವರು ನಾನು ಹೋಗುವುದಿಲ್ಲ. ಏಕೆಂದರೆ ನಾನು ಮಂತ್ರಿ ಎಂದು ಗೌರವಿಸುತ್ತಾರೆ. ಅದು ನನಗೆ ಬೇಕಿಲ್ಲ. ನನ್ನ ದಲಿತ ಸಮುದಾಯದವರಿಗೆ ದೇವಸ್ಥಾನಕ್ಕೆ ಪ್ರವೇಶ ಸಿಗಬೇಕು. ಅದು ನನಗೆ ಬೇಕು ಎಂದು ಹೇಳಿ ಅವರ ಆಹ್ವಾನವನ್ನು ನಿರ್ದಾಕ್ಷಿಣ್ಯವಾಗಿ ತಿರಸ್ಕರಿಸಿದರು. ನಂತರ ಮಹಾರಾಜರು ಅನುಮತಿ ನೀಡಿದರು. ಅಂದಿನಿಂದ ದಲಿತರಿಗೆ ಚಾಮುಂಡಿ ದೇವಿಯ ದೇವಸ್ಥಾನಕ್ಕೆ ಪ್ರವೇಶ ದೊರೆಯಿತಂತೆ.[೧೪] ನಂತರ ಶಿರಾ ತಾಲ್ಲೂಕಿನಲ್ಲಿ ಟಿ.ತಾರೇಗೌಡರು ದಲಿತೋದ್ಧಾರದ ಪ್ರಯುಕ್ತವಾಗಿ ೧೯೪೭ರಲ್ಲಿ ಶಿರಾ ತಾಲ್ಲೂಕಿನ ತಾವರೆಕೆರೆ ದೇವಸ್ಥಾನ ಹಾಗೂ ಬಂಡಿರಂಗನಾಥ ಸ್ವಾಮಿ ದೇವಸ್ಥಾನಗಳಿಗೆ ಅಂದಿನ ಶಿಕ್ಷಣ ಮಂತ್ರಿಯಾಗಿದ್ದ ಚನ್ನಿಗರಾಮಯ್ಯನವರ ಜೊತೆ ಸೇರಿ ದಲಿತರೊಂದಿಗೆ ಪ್ರವೇಶ ಮಾಡಿದರು. ಅಂದು ದಲಿತರಿಗೆ ಸಾರ್ವಜನಿಕ ಹೋಟಲ್‌ಗಳಿಗೆ ಪ್ರವೇಶ ನಿಷಿದ್ಧವಾಗಿತ್ತು. ಆದ್ದರಿಂದ ತಿಪಟೂರಿನಲ್ಲಿ ಟಿ.ದಾಸಪ್ಪನರು ದಲಿತರೊಂದಿಗೆ ಹೋಟೆಲ್ ಪ್ರವೇಶ ಚಳುವಳಿಯನ್ನು ಹಮ್ಮಿಕೊಂಡರು.[೧೫] ಚನ್ನಿಗರಾಮಯ್ಯನವರು ಶ್ರವಣಬೆಳಗೊಳದ ಗೊಮ್ಮಟನ ದರ್ಶನಕ್ಕೆ ಹೋದಾಗ ಜೈನರು ಹಿಂದೂಗಳಲ್ಲವೆಂದು ಹಿಂದೂಗಳಾದ ದಲಿತರಿಗೆ ಪ್ರವೇಶ ನೀಡುವುದಿಲ್ಲವೆಂದು ಶ್ರವಣಬೆಳಗೊಳದ ಗೊಮ್ಮಟನ ದರ್ಶನಕ್ಕೆ ಅನುಮತಿ ನಿರಾಕರಿಸಿದಾಗ 'ನಾನು ಮಂತ್ರಿ ಆದರೂ ನಿಮ್ಮ ಮನಸ್ಸು ನೋಯಿಸಿ ದೇವಾಲಯ ಪ್ರವೇಶ ಮಾಡುವುದು ನನಗೆ ಇಷ್ಟವಿಲ್ಲ' ಎಂದು ಹೇಳಿದಾಗ ಅಲ್ಲಿಯ ಆಡಳಿತ ಮಂಡಳಿಯವರು ಚನ್ನಿಗರಾಮಯ್ಯ ಅವರ ಕ್ಷಮೆ ಕೇಳಿ ತಲೆ ತಗ್ಗಿಸಿದರು. ಅಂತಹ ಪ್ರಸಂಗಗಳಲ್ಲಿ ಸವರ್ಣೀಯರ ಮನಃ ಪರಿವರ್ತನೆ ಆಗದ ಹೊರತು ಅಸ್ಪೃಶ್ಯತೆಯನ್ನು ತೊಡೆದು ಹಾಕಲು ಸಾಧ್ಯವಿಲ್ಲ ಎಂಬುದನ್ನು ಅರಿತಿದ್ದರು. ಅದರಿಂದ ಸಮಾಜದಲ್ಲಿ ಸಮಾನತೆಯನ್ನು ಉಂಟು ಮಾಡಲು, ಪ್ರತ್ಯೇಕತೆ ಮನೋಭಾವನೆಯನ್ನು ಹೋಗಲಾಡಿಸಲು ಹೆಚ್ಚು ಶ್ರಮಿಸಿದರು. ಇಂತಹ ಅನಿಷ್ಟ ಆಚರಣೆಗನ್ನು ಖಂಡಿಸುತ್ತಿದ್ದರು. ದಲಿತರ ಬಗ್ಗೆ ಅವರ ಅಭಿವೃದ್ಧಿಯ ಬಗ್ಗೆ ಸದಾ ಚಿಂತನೆ ನಡೆಸುತ್ತಾ ದಲಿತರು ಸ್ವಾವಲಂಬಿಗಳಾಗಿ ಬದುಕಬೇಕು, ಅವರನ್ನು ಅನಿಷ್ಟ ಪದ್ಧತಿಗಳಿಂದ ಮುಕ್ತಗೊಳಿಸಬೇಕೆಂಬ ಹೊಂಗನಸನ್ನು ಹೊತ್ತುಕೊಂಡಿದ್ದರು.[೧೬]

## ೫.೧.೩. ಸಹಪಂಕ್ತಿ ಭೋಜನ

ಸ್ವಾತಂತ್ರ್ಯ ಸಂಗ್ರಾಮದಲ್ಲಿ ದಲಿತರ ಪಾತ್ರ ನಿರ್ಣಾಯಕವಾದುದಾಗಿತ್ತು. ಆದರೆ ಮುಂಚೂಣಿಯಲ್ಲಿದ್ದವರ ಸಾಹಸಗಳು ಮಾತ್ರ ಅಲಕ್ಕಾಗಿ ಉಳಿದಂತೆ ಕಣ್ಮರೆಯಾಗಿ ಬಿಟ್ಟಿವೆ. ಸ್ವಾತಂತ್ರ್ಯ ಸಂಗ್ರಾಮದ ಮುಚ್ಚಿದ ಮುಖಗಳನ್ನು ಇಲ್ಲಿ ಅನಾವರಣ ಮಾಡಲು ಪ್ರಯತ್ನಿಸಲಾಗಿದೆ. ಸ್ವಾತಂತ್ರ್ಯ ಹೋರಾಟದಲ್ಲಿ ದಲಿತರ ಇಬ್ಬಗೆಯ ಹೋರಾಟವನ್ನು ನಡೆಸಬೇಕಾಗಿತ್ತು. ದೇಶದ ಮೇಲೆ ಆಕ್ರಮಣ ನಡೆಸಿದ್ದ ವಸಾಹತುಶಾಹಿಯನ್ನು ಒಂದು ಕಡೆ ಮತ್ತು ದೇಶದೊಳಗೆ ಉನ್ನತ ಜಾತಿ ವರ್ಗಗಳು ನಡೆಸಿದ್ದ ದಲಿತರ ಮೇಲಿನ ದೌರ್ಜನ್ಯ ಹಿಂಸೆ ಹೀಗೆ ಎರಡನ್ನೂ ಅವರು ಎದುರಿಸಬೇಕಾಗಿತ್ತು. ದಲಿತರು ಹೀಗೆ ಇಬ್ಬಗೆಯ ಹೋರಾಟವನ್ನು ನಿಭಾಯಿಸಿದರು ಎಂಬುದು ತುಂಬಾ ಗಂಭೀರವಾದ ಸಂಗತಿಯಾಗಿದೆ.[೬] ದಲಿತರು ನಮ್ಮ ಸಮಾಜದ ಎಲ್ಲಾ ಬಗೆಯ ದುಸ್ಥಿತಿಗಳಿಂದ ನರಳುತ್ತಿದ್ದಾರೆ. ಸಾಮಾಜಿಕ ದುಸ್ಥಿತಿ, ಆರ್ಥಿಕ ದುಸ್ಥಿತಿ, ಧಾರ್ಮಿಕ ದುಸ್ಥಿತಿ, ಶೈಕ್ಷಣಿಕ ದುಸ್ಥಿತಿಗಳಿಂದ ನರಳುತ್ತಿದ್ದಾರೆ. ಸಾಮಾಜಿಕ ಅಸಮಾನತೆ, ಆರ್ಥಿಕ ಶೋಷಣೆ ದುಸ್ಥಿತಿಗಳು ಅವರು ಎದುರಿಸುತ್ತಿರುವ ಸಮಸ್ಯೆಗಳಾಗಿವೆ. ದಲಿತರ ಸಾಮಾಜಿಕ ದುಸ್ಥಿತಿಯ ನಿವಾರಣೆಗೆ ಬಂಡವಾಳದ ಅಗತ್ಯವೇನಿಲ್ಲ. ಇದಕ್ಕೆ ಸಾಮಾಜಿಕ ಪರಿವರ್ತನೆಯ ಅಗತ್ಯವಿದೆ. ಆರ್ಥಿಕ ಅಭಿವೃದ್ಧಿಗೆ ಬಂಡವಾಳದ ಅಗತ್ಯವಿದೆ. ಆದರೆ ಬಂಡವಾಳ ಹೂಡಿಕೆಯ ಅನುಕೂಲಗಳೆಲ್ಲವೂ ಮೇಲುಜಾತಿ, ಮೇಲುವರ್ಗಗಳ ಪಾಲಾಗುತ್ತದೆ. ಸಾಮಾಜಿಕವಾಗಿ ದಲಿತರು ಜಾತಿಸಂಬಂಧಿ ತಾರತಮ್ಯ ಹಾಗೂ ಶೋಷಣೆಯನ್ನು ಎದುರಿಸುತ್ತಿದ್ದಾರೆ. ಆರ್ಥಿಕವಾಗಿ ವರ್ಗ ಸಂಬಂಧಿ ಶೋಷಣೆಯನ್ನು ಎದುರಿಸುತ್ತಿದ್ದಾರೆ.[೧೮] ಇಲ್ಲಿ ಗಾಂಧೀಜಿಯವರು ದಲಿತರ ಸಮಸ್ಯೆಯನ್ನು ನೈತಿಕತೆಯ ನೆಲೆಯಿಂದ ಪರಿಭಾವಿಸಿಕೊಂಡಿದ್ದು ಸ್ಪಷ್ಟ. ಹಿಂದೂಗಳ ಮನಃ ಪರಿವರ್ತನೆಯ ಮೂಲಕ ದಲಿತರ ಸಮಸ್ಯೆಯನ್ನು ಪರಿಹರಿಸುತ್ತೇನೆ ಎಂಬುದು ಗಾಂಧೀಜಿಯವರ ಇನ್ನೊಂದು ನಂಬಿಕೆಯಾಗಿತ್ತು. ಆದಕ್ಕಾಗಿ ಅವರು ಹರಿಜನ ಸೇವಾ ಸಂಘವನ್ನು ಕಟ್ಟಿದರು. ಅದರ ಮೂಲಕ ಅಸ್ಪೃಶ್ಯತೆಯನ್ನು ನಿವಾರಿಸುವ ಅಭಿಯಾನ ಕೈಗೊಂಡರು. ಚನ್ನಿಗರಾಮಯ್ಯನವರು ಗಾಂಧೀಜಿಯವರ ನಿಷ್ಠಾವಂತ ಅನುಯಾಯಿಗಳಾಗಿದ್ದರು. ಗಾಂಧೀಜಿಯವರು ಮೇಲ್ವರ್ಗದವರ ಮನಃ ಪರಿವರ್ತನೆ ಮೂಲಕ ಅಸ್ಪೃಶ್ಯತೆಯನ್ನು ತೊಡೆದು ಹಾಕಲು ಪ್ರಯತ್ನಿಸಿದರೋ ಅದೇ ಮಾರ್ಗದಲ್ಲಿ ಶ್ರೀಯುತರು ನಡೆದರು. ಇವರು ಸವರ್ಣೀಯರ ಮನಃ ಪರಿವರ್ತನೆಗೆ ಹೆಚ್ಚು ಗಮನ ನೀಡುತ್ತಿದ್ದರು. ಸವರ್ಣೀಯರು ಮತ್ತು ದಲಿತರ ನಡುವೆ ಐಕ್ಯತೆಯನ್ನು ಮೂಡಿಸಲು ಪ್ರಯತ್ನಿಸುತ್ತಿದ್ದರು. ಇದಕ್ಕಾಗಿ ಅವರು ಅನೇಕ ವಿಚಾರವಂತರನ್ನು, ಬುದ್ಧಿಜೀವಿಗಳನ್ನು ಸಂಸ್ಥಾನದ ನಾಯಕರನ್ನು ಆಹ್ವಾನಿಸಿ ವಿಶೇಷವಾದ ಉಪನ್ಯಾಸಗಳನ್ನು ಏರ್ಪಡಿಸಿ ಅರಿವನ್ನು ಮೂಡಿಸಲು ಪ್ರಯತ್ನಿಸುತ್ತಿದ್ದರು. ಶೋಷಣೆ ಮಾಡುವುದು ಮಹಾ ಅಪರಾಧ, ದಲಿತರು ಹಿಂದುಗಳಿಗೆ ಸಮಾನರೆಂದು ಅವರಲ್ಲಿದ್ದಂತಹ ಸಂಕುಚಿತ ಮನೋಭಾವನೆಯನ್ನು ಬಿಟ್ಟು ವಿಶಾಲ ಮನೋಭಾವನೆಯನ್ನು ಬೆಳೆಸಿಕೊಳ್ಳಬೇಕೆಂದು ಸವರ್ಣೀಯರಲ್ಲಿ ಮನವಿ ಮಾಡುತ್ತಿದ್ದರು. ಇದಕ್ಕಾಗಿ ಅವರು ಸಹಪಂಕ್ತಿ ಭೋಜನದ ವ್ಯವಸ್ಥೆ ಮಾಡುತ್ತಿದ್ದರು. ಎಲ್ಲಾ ವರ್ಗದವರಿಗೂ ಸಹ ಒಂದೇ ಕಡೆ ಭೋಜನ ವ್ಯವಸ್ಥೆ ಮಾಡಿ ದಲಿತರ

ಮತ್ತು ಸವರ್ಣೀಯರ ನಡುವೆ ಹೊಂದಾಣಿಕೆ ಹಾಗೂ ಐಕ್ಯತಾ ಮನೋಭಾವನೆಯನ್ನು ಬೆಳೆಸಲು ಶ್ರಮಿಸಿದರು. ದಲಿತರನ್ನು ಮುಟ್ಟಿದರೆ ಸಮಾಜಕ್ಕೆ ದಂಡ ಕೊಡಬೇಕಿದ್ದ ಆ ಕಾಲದಲ್ಲಿ ಹೊಳಲ್ಕೆರೆ ವಾಸಿಯಾದ ಎಂ.ಲಿಂಗಪ್ಪನವರು ಲಿಂಗಾಯಿತರಾಗದ್ದು, ಅವರಿಗೆ ದಲಿತರೆಂದರೆ ಅತ್ಯಂತ ಪ್ರೀತಿ, ವಿಶ್ವಾಸ ಮತ್ತು ಗೌರವ ಅವರ ಬೆಂಬಲದಿಂದ ಅವರ ಮನೆಯಲ್ಲಿ ದಲಿತರಿಗೆ ಸಹಪಂಕ್ತಿ ಭೋಜನ ಮಾಡಿಸಿದ್ದ ಕೀರ್ತಿ ಆರ್.ಚನ್ನಿಗರಾಮಯ್ಯನವರಿಗೆ ಹಾಗೂ ಸಿ.ಟಿ.ಹನುಮಂತಯ್ಯನವರಿಗೆ ಸಲ್ಲುತ್ತದೆ. ಎಂ.ಲಿಂಗಪ್ಪನವರ ಬೆಂಬಲ ಪಡೆದ ಇವರು ದಲಿತರ ಬಗ್ಗೆ ಅಸ್ಪೃಶ್ಯತೆ ಮಾಡುವುದು ಮಹಾ ಅಪರಾಧ ಎಂದು ಸಾರಿದ್ದರು. ಚನ್ನಿಗರಾಮಯ್ಯನವರು ಪ್ರತ್ಯೇಕತೆಯನ್ನು ವಿರೋಧಿಸುತ್ತಿದ್ದರು. ದಲಿತರು ಮತ್ತು ಸವರ್ಣೀಯರು ಏಕತೆಯಿಂದ ಇರುವಂತೆ ಮಾಡಲು ಪ್ರಯತ್ನಿಸುತ್ತಿದ್ದರು.[೫೯]

ಚನ್ನಿಗರಾಮಯ್ಯ ಅವರು ಮಂತ್ರಿಯಾಗಿದ್ದ ಸಂದರ್ಭದಲ್ಲಿ ಕೋಲಾರದಲ್ಲಿ ವಸತಿನಿಲಯವನ್ನು ಸ್ಥಾಪಿಸಿದರು. ಕೆಲವರು ಹರಿಜನರಿಗಾಗಿ ಒದಗಿಸಿದ್ದ ಹಣದಿಂದ ಕಟ್ಟಿರುವ ಹಾಸ್ಟೆಲ್‌ಗೆ ಬೇರೆಯವರನ್ನು ಸೇರಿಸುತ್ತಿದ್ದಾರೆ. ಹಾಗೆ ಮಾಡಬಾರದೆಂದು ವಿರೋಧ ವ್ಯಕ್ತಪಡಿಸಿದರು. ಅದಕ್ಕೆ ಶ್ರೀಯುತರು ನಚಿಕೇತ ನಿಲಯ ಎಂದು ಅದಕ್ಕೆ ಹೆಸರಿಟ್ಟಿದ್ದಾರೆ. ಬಹಳ ದೊಡ್ಡಕಟ್ಟಡ. ಅದರಲ್ಲಿ ಈಗಾಗಲೇ ದಲಿತರಲ್ಲದೆ ಸವರ್ಣ ಹಿಂದೂಗಳು ೨೦ ವಿದ್ಯಾರ್ಥಿಗಳಿದ್ದಾರೆಂದು ಕೇಳಿದ್ದೇನೆ. ನಾವೆಲ್ಲರೂ ಜೊತೆಯಲ್ಲಿರಬೇಕು. ಪ್ರತ್ಯೇಕತಾ ಮನೋಭಾವ ಹೋಗಬೇಕು ಎಂದು ಹೇಳುವಾಗ, ಬೇರೆ ಪಂಗಡದ ವಿದ್ಯಾರ್ಥಿಗಳನ್ನು ಸೇರಿಸಬಾರದು. ದಲಿತರಿಗೆ ಇರಬೇಕೆಂದು ಹೇಳುವುದು ಸರಿಯಲ್ಲ. ಬೇರೆಯವರ ಕೇರಿಗಳಲ್ಲಿ ನಿವೇಶನಗಳನ್ನು ದಲಿತರಿಗೆ ಕೊಡಿ ಎಂದು ಕೇಳಬಹುದು. ಪ್ರತ್ಯೇಕವಾಗಿರುವುದಕ್ಕೆ ಬದಲು ಸ್ವರ್ಣ ಹಾಸ್ಟೆಲ್‌ನಲ್ಲಿರುವುದಕ್ಕೆ ಅವಕಾಶ ಕೊಡಿ ಎಂದು ಕೇಳಬಹುದು. ಇದನ್ನು ಬಿಟ್ಟು ಬೇರೆ ಇರಬೇಕೆಂದು ಹೇಳುವುದು ಸರಿಯಲ್ಲ. ಪರಿಶಿಷ್ಟ ಜಾತಿ ನಿಧಿಯಿಂದ ಖರ್ಚು ಮಾಡಿ ಕಟ್ಟಿದ್ದಾರೆಂದು ಹೇಳಿದರು. ಈ ಕಾರಣದಿಂದ ದಲಿತರಿಗೆ ಹೆಚ್ಚು ಕೋಟಾ ಕೊಡಿ ಎಂದು ಕೇಳಬಹುದೇ ಹೊರತು ಸವರ್ಣೀಯರು ಸೇರಬಾರದೆಂದು ಹೇಳುವುದು ಸರಿಯಲ್ಲ. ಈಗಿರುವ ಸವರ್ಣಯರ ಬಾವಿಗಳಿಗೆ ದಲಿತರಿಗೆ ಪ್ರವೇಶವಿಲ್ಲವೆಂದು ಹೇಳುವುದಕ್ಕಾಗುವುದಿಲ್ಲಯ ಈ ರೀತಿ ಕಾನೂನು ಇಲ್ಲ. ಬೇರೆಯವರು ಅಸ್ಪೃಶ್ಯರ ಬಾವಿಗಳಿಗೆ ಹೋದರೆ ತೊಂದರೆಯಾಗುತ್ತದೆ. ಸವರ್ಣೀಯರ ಬಾವಿಗಳಿಗೆ ಕೆಲವು ಕಡೆಗಳಲ್ಲಿ ದಲಿತರನ್ನು ಬಿಟ್ಟಿದ್ದಾರೆ. ಇದು ನಿಧಾನವಾಗಿ ತಾನಾಗಿಯೇ ಸರಿಹೋಗುತ್ತದೆ. ಹೊಸದಾಗಿ ಜಮೀನುಗಳನ್ನು ಪಡೆದು ಸೈಟುಗಳನ್ನು ಮಾಡುವಾಗ ಎಲ್ಲಾ ಜಾತಿಗಳ ಮತ್ತು ವರ್ಗದವರಿಗೂ ಒಂದೇ ಕಡೆ ಸೈಟುಗಳನ್ನು ಕೊಡಬೇಕೆಂದು ನಮ್ಮ ಅಭಿಪ್ರಾಯ. ಟ್ರಸ್ಟ್ ಮತ್ತು ಬೋರ್ಡಿನವರಿಗೂ ಕೂಡ ಎಲ್ಲಾ ಜಾತಿಗಳ ಮಧ್ಯೆ ಸೈಟುಗಳನ್ನು ದಲಿತರಿಗೆ ಕೊಡಬೇಕೆಂದು ಹೇಳಿದ್ದೇನೆ. ದಲಿತರಿಗೆ ರಿಯಾಯಿತಿಯ ಮೇಲೆ ಕೊಡಬೇಕೆಂದು ಹೇಳಿದ್ದೇನೆ. ಹೀಗೆ ಪ್ರತ್ಯೇಕತೆಯನ್ನು ಆದಷ್ಟೂ ಕಡಿಮೆ ಮಾಡಬೇಕು, ಬೇರೆ ಪ್ರತ್ಯೇಕ ಬಾವಿಗಳನ್ನು ತೋಡುವುದನ್ನು ಆದಷ್ಟು ನಿಲ್ಲಿಸಬೇಕು ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಈ ಮೇಲಿನ ಅಭಿಪ್ರಾಯವನ್ನು ಗಮನಿಸಿದಾಗ ಚನ್ನಿಗರಾಮಯ್ಯ ಅವರಿಗೆ ಸಮಾಜದಲ್ಲಿ 'ಎಲ್ಲರೂ ಒಟ್ಟಾಗಿ

ಬಾಳ್ವೆ ನಡೆಸಬೇಕು. ಮೇಲು ಕೀಳು ಎಂಬ ಭಾವನೆಯನ್ನು ದೂರ ಮಾಡಬೇಕು. ಅಸ್ಪೃಶ್ಯರು, ಸವರ್ಣೀಯರು ಪರಸ್ಪರ ತಾರತಮ್ಯ ಮಾಡದೆ, ಒಂದೇ ಎಂಬ ಭಾವನೆಯಿಂದ ಜೀವನ ನಡೆಸಿದಾಗ ಮಾತ್ರ ನಮ್ಮ ದೇಶದಲ್ಲಿರುವಂತೆ ಅಸ್ಪೃಶ್ಯತೆ ಎಂಬ ಅನಿಷ್ಟ ಪಿಡುಗನ್ನು ತೊಡೆದು ಹಾಕಲು ಸಾಧ್ಯವಾಗುತ್ತದೆ. ಸವರ್ಣೀಯರ ಮನಃ ಪರಿವರ್ತನೆಯಾಗದ ಹೊರತು ನಾವು ಅಸ್ಪೃಶ್ಯತೆಯಂತ ಕೆಟ್ಟ ಆಚರಣೆಯನ್ನು ಹೋಗಲಾಡಿಸಲು ಸಾಧ್ಯವಿಲ್ಲ' ಎಂಬ ಅಂಶವನ್ನು ತಿಳಿದಿದ್ದರು. ಆದ್ದರಿಂದ ಸಹಪಂಕ್ತಿ ಬೋಜನದಂತಹ ಕಾರ್ಯಗಳನ್ನು ಹಮ್ಮಿಕೊಂಡು ಅದರ ಮುಖಾಂತರ ಎಲ್ಲರಲ್ಲಿಯೂ ಸಾಮರಸ್ಯವನ್ನು ಮೂಡಿಸಲು ಪ್ರಯತ್ನಿಸುತ್ತಿದ್ದರು. ಪ್ರತ್ಯೇಕತಾ ಮನೋಭಾವನೆಯನ್ನು ಹೋಗಲಾಡಿಸಲು ಹಲವು ರೀತಿಯ ಕಾರ್ಯಗಳನ್ನು ಕೈಗೊಂಡು ಪ್ರಯತ್ನಿಸಿದರು. ಸವರ್ಣೀಯರು ಮತ್ತು ದಲಿತರು ಒಂದೇ ಕಡೆ ನೆಲೆಸಿ, ಒಂದೇ ಬಾವಿಯ ನೀರನ್ನು ಉಪಯೋಗಿಸಲು ಸೂಚಿಸುತ್ತಿದ್ದರು. ಆದ್ದರಿಂದ ಸಮಾಜದ ಎಲ್ಲಾ ವರ್ಗದವರ ಪ್ರೀತಿ ವಿಶ್ವಾಸ ಮೆಚ್ಚುಗೆಗೆ ಪಾತ್ರರಾಗಿದ್ದರು.[೨೦]

### ೫.೨.ಶೈಕ್ಷಣಿಕ ಚಿಂತನೆಗಳು

ಸಾವಿರಾರು ವರ್ಷಗಳಿಂದಲೂ ಮನುವಾದಿ ವ್ಯವಸ್ಥೆ ಭಾರತ ದೇಶದ ಅಸ್ಪೃಶ್ಯರಿಗೆ ಶಿಕ್ಷಣವನ್ನು ನಿರಾಕರಿಸಿಕೊಂಡು ಬಂದಿದೆ. ಅಕ್ಷರದಿಂದ ವಂಚಿತವಾದ ಯಾವುದೇ ಸಮಾಜದ ಯೋಚನೆಗಳು ಪ್ರಗತಿದಾಯಕವಾಗಿರದೆ ಅಜ್ಞಾನ ಮತ್ತು ಅಂಧಕಾರದ ಕಡೆಗೆ ಚಲಿಸುವ ಸಮಾಜ ಚಲನಶೀಲವಾಗಿರುವುದಿಲ್ಲ. ಈ ಅಂಶಗಳನ್ನು ದೇಶದ ಚರಿತ್ರೆಯಲ್ಲಿ ಮೊಟ್ಟ ಮೊದಲ ಬಾರಿಗೆ ಕಂಡುಕೊಂಡ ಜ್ಯೋತಿಬಾ ಫುಲೆಯವರು ಅಸ್ಪೃಶ್ಯ ಸಮಾಜಕ್ಕೆ ಮೊಟ್ಟ ಮೊದಲ ಬಾರಿಗೆ ಕ್ರಿ.ಶ.೧೮೪೮ರಲ್ಲಿ ಶಿಕ್ಷಣದ ಅವಕಾಶವನ್ನು ದೊರಕಿಸಿಕೊಡುವ ಮೂಲಕ ಹೊಸ ಕ್ರಾಂತಿಯನ್ನು ಸೃಷ್ಟಿ ಮಾಡಿದರು. ಅಂಬೇಡ್ಕರ್ ಕಾಲದಲ್ಲಿ ಭಾರತಕ್ಕೆ ಭೇಟಿ ಕೊಟ್ಟ ಸೈಮನ್ ಆಯೋಗ ಸಾರ್ವಜನಿಕ ಶಿಕ್ಷಣವನ್ನು ಜಾರಿಗೊಳಿಸುವ ಸಲುವಾಗಿ ಪ್ರಯತ್ನಿಸಿತು. ೧೯೪೭ರಲ್ಲಿ ಸ್ವತಂತ್ರ ಭಾರತದಲ್ಲಿ ಶಿಕ್ಷಣ ಸಾರ್ವಜನಿಕ ಸ್ವತ್ತಾಯಿತು. ಹಲವು ದಶಕಗಳ ಕಾಲ ಶಾಲೆಯ ಬಾಗಿಲುಗಳು ಅಸ್ಪೃಶ್ಯರಿಗೆ ಮುಚ್ಚಿಯೇ ಇದ್ದವು. ಸ್ವತಂತ್ರ ಭಾರತದ ಅಂಕಿ ಅಂಶಗಳ ಪ್ರಕಾರ ಈ ತನಕ ಶಿಕ್ಷಣ ಪಡೆದವರ ಸಂಖ್ಯೆ ಶೇ. ೪೫ರಿಂದ ಶೇ. ೫೦ರಷ್ಟು ಇದ್ದು ಎಲ್ಲಾ ಜಾತಿ ವರ್ಗಗಳಿಗೆ ಅನ್ವಯಿಸುವ ಮಾತು. ಇನ್ನು ಸಮಾಜದ ಕಟ್ಟಕಡೆಯ ಜನವರ್ಗವಾದ ಅಸ್ಪೃಶ್ಯರಲ್ಲಿ ಶಿಕ್ಷಣವನ್ನು ಪಡೆದವರ ಸಂಖ್ಯೆ ಶೇ. ೧೫ರಿಂದ ಶೇ. ೨೦ರಷ್ಟು. ರಾಷ್ಟ್ರದ ಎಲ್ಲಾ ಆಗು ಹೋಗುಗಳ ಜ್ಞಾನವನ್ನು ನೀಡಬೇಕಾಗಿರುವ ಶಿಕ್ಷಣರಂಗ ಶೋಷಣೆ ಗೀಡಾದ ಸಮಾಜ ಒಂದರಿಂದ ದೂರ ಉಳಿದಿದೆ ಎಂದರೆ ಅಷ್ಟರ ಮಟ್ಟಿಗೆ ದೇಶ ಹಿಂದುಳಿದಿದೆ ಎಂದೇ ಅರ್ಥ. ದೇಶದ ಪ್ರಗತಿ ಎಂಬುದು ಪ್ರತಿಯೊಂದು ಜಾತಿ ಜನಾಂಗವು ಕೂಡ ಎಲ್ಲಾ ಸೌಲಭ್ಯಗಳನ್ನು ಸೌಕರ್ಯಗಳನ್ನು ಪಡೆದಾಗಲೇ ಆಗುವಂತಹುದು. ಶಿಕ್ಷಣ ಪಡೆಯದೆ ಇರುವ ಅಸ್ಪೃಶ್ಯ ಸಮಾಜ ದೇಶದ ಮುಖ್ಯ ವಾಹಿನಿಯಲ್ಲಿ ಭಾಗವಹಿಸಲು ಆಗುವುದಿಲ್ಲ. ಜ್ಞಾನ, ಉದ್ಯೋಗಗಳು ಅಸ್ಪೃಶ್ಯರಿಗೆ ಲಭಿಸುವುದು ಶಿಕ್ಷಣ ಪಡೆದಾಗ ಮಾತ್ರ ಜ್ಞಾನ ಮತ್ತು ಉದ್ಯೋಗದಿಂದ ವಂಚಿತವಾಗಿರುವ ಅಸ್ಪೃಶ್ಯ ಲೋಕದ ಪ್ರಗತಿ

ಮರೀಚಿಕೆಯಾಗಿಯೇ ಉಳಿದಿದೆ. ಹೀಗಾಗಿ ಅಸ್ಪೃಶ್ಯರಲ್ಲಿ ಶೈಕ್ಷಣಿಕ ಸಮಸ್ಯೆ ಬಹು ಪ್ರಧಾನವಾಗಿ ಕಾಣಿಸುತ್ತದೆ. ಈ ಕಾರಣಗಳಿಂದಾಗಿ ನಮ್ಮ ಅನೇಕ ಮಹನೀಯರು ಅಸ್ಪೃಶ್ಯರಿಗೆ ಶಿಕ್ಷಣವನ್ನು ದೊರಕಿಸಿಕೊಡುವ ಪ್ರಯತ್ನ ಮಾಡಿದ್ದಾರೆ. ಪ್ರಾಚೀನ ಕಾಲದಿಂದ ಇಂದಿನ ಆಧುನಿಕ ಕಾಲದವರೆಗೂ ಸಹ ದಲಿತರ ಶಿಕ್ಷಣದ ಬಗ್ಗೆ ಚಿಂತನೆಗಳು ನಡೆಯುತ್ತಲೇ ಇವೆ. ಸ್ವಾತಂತ್ರ್ಯಪೂರ್ವದಲ್ಲಿಯೇ ಶಿಕ್ಷಣದ ಮಹತ್ವವನ್ನು ತಿಳಿದಿದ್ದ ಚನ್ನಿಗರಾಮಯ್ಯನವರು ಶಿಕ್ಷಣದ ಬಗ್ಗೆ ಅಪಾರವಾದ ಕಾಳಜಿಯನ್ನು ಇಟ್ಟಿದ್ದರು. ಇವರು ಓದಿದ್ದು ಕಡಿಮೆಯಾದರೂ ಅಪಾರವಾದ ಲೋಕಾನುಭವ ಜ್ಞಾನವನ್ನು ಪಡೆದಿದ್ದರು. ಅವರಿಗೆ ಶಿಕ್ಷಣದ ಮಹತ್ವ ಮತ್ತು ಅದರ ಅವಶ್ಯಕತೆಯನ್ನು ಮನಗಂಡಿದ್ದರು. ದಲಿತರಲ್ಲಿ ಇರುವ ಕೀಳು ಭಾವನೆಯನ್ನು ಹೋಗಲಾಡಿಸುವ ಪ್ರಯತ್ನ ಮಾಡಿದರು.[೨೧] ದಲಿತರು ಮೊದಲು ಅಕ್ಷರಸ್ಥರಾಗಬೇಕು. ಇದರ ಮೂಲಕವೇ ಅಸ್ಪೃಶ್ಯರ ಏಳಿಗೆ ಸಾಧ್ಯ. ದಲಿತರು ಸಹ ಮಾನವರೇ. ಅವರಿಗೂ ಬದುಕುವ ಹಕ್ಕಿದೆ, ಸ್ವಾತಂತ್ರ್ಯವಿದೆ ಎಂದು ದಲಿತರ ಪರವಾಗಿ ಮಾತನಾಡಿ ದಲಿತರಲ್ಲಿ ಸಾಮಾಜಿಕ ಪ್ರಜ್ಞೆ ಮೂಡಿಸುತ್ತಿದ್ದರು. ಇವರು ದಲಿತರ ಮಕ್ಕಳನ್ನು ವಿದ್ಯಾವಂತರನ್ನಾಗಿ ಮಾಡಲು ವಿದ್ಯಾರ್ಥಿ ನಿಲಯಗಳನ್ನು, ಶಾಲಾ ಕಾಲೇಜುಗಳನ್ನು ಸ್ಥಾಪಿಸಿ ಅವುಗಳಿಗೆ ಮೂಲಭೂತ ಸೌಕರ್ಯಗಳನ್ನು ಒದಗಿಸಿದ್ದರು. ಚನ್ನಿಗರಾಮಯ್ಯ ಅವರು ಶಿಕ್ಷಣ ಮಂತ್ರಿಗಳಾಗಿದ್ದ ಸಂದರ್ಭದಲ್ಲಿ ರಾಜ್ಯಾದ್ಯಂತ ಅನೇಕ ಶಾಲೆಗಳನ್ನು ತೆರೆದರು. ಹೆಚ್ಚು ಹೆಚ್ಚು ಪ್ರಾಥಮಿಕ ಪ್ರೌಢಶಾಲೆಗಳನ್ನು ಸ್ಥಾಪಿಸಲು ಶ್ರಮಿಸಿದರು. ಶಿಕ್ಷಣದಿಂದ ಮಾತ್ರ ಅಸ್ಪೃಶ್ಯರಲ್ಲಿ ಜಾಗೃತಿಯನ್ನು ಉಂಟುಮಾಡಲು ಸಾಧ್ಯ. ಇತರರ ಹಾಗೆ ಜನಸಂಖ್ಯೆಯಲ್ಲಿ ನಾವು ಇದ್ದೇವೆ. ಇತರರಂತೆ ನಾವು ಮನುಷ್ಯರು, ಬಡತನದ ದೆಸೆಯಿಂದ ನಮ್ಮವರು ವಿದ್ಯಾವಂತರಾಗಿಲ್ಲ. ಆದ ಕಾರಣ ವಿದ್ಯಾವಂತರಾಗಲು ಎಲ್ಲಾ ರೀತಿಯ ಸಹಕಾರವನ್ನು ಸರ್ಕಾರದ ಮುಖಾಂತರ ಕಲ್ಪಿಸುತ್ತೇನೆ. ಆದ್ದರಿಂದ ಪ್ರತಿಯೊಬ್ಬ ದಲಿತರು ಸಹ ವಿದ್ಯಾವಂತರಾಗಬೇಕು. ಸರ್ಕಾರದ ಸವಲತ್ತುಗಳನ್ನು ಪಡೆಯುವಂತಾಗಬೇಕು ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಿದ್ದರು. ಅವರಿಗೆ ಶಿಕ್ಷಣದ ಬಗ್ಗೆ ಇದ್ದ ಕಾಳಜಿರಯಿಂದ, ಎಲ್ಲರಿಗೂ ಶಿಕ್ಷಣ ದೊರೆಯಬೇಕೆಂಬ ಹಂಬಲದಿಂದ ಅನೇಕ ಕಡೆಗಳಲ್ಲಿ ಶಾಲೆಗಳನ್ನು ಕಾಲೇಜುಗಳನ್ನು ತೆರೆದರು. ದಲಿತ ಹಾಗೂ ಇತರ ಹಿಂದುಳಿದ ವರ್ಗಗಳಿಗೆ ಹಾಸ್ಟೆಲ್ ಸೌಲಭ್ಯವನ್ನು ಕಲ್ಪಿಸಿಕೊಟ್ಟರು. ಆದ್ದರಿಂದ ಶಿಕ್ಷಣ ವ್ಯವಸ್ಥೆಗೆ ಒಳಗಾಗುವುದರಿಂದಲೂ ಕೆಳಜಾತಿ ಜನರು ಮತ್ತು ದಲಿತರು ಹೊಸ ಬಗೆಯ ಎಚ್ಚರವನ್ನು ಪಡೆದರು. ತಮ್ಮ ಹಕ್ಕುಗಳನ್ನು ನೆನಪಿಸಿಕೊಂಡಿವೆ. ಹೋರಾಟದ ಹಾದಿಯನ್ನು ತುಳಿದಿವೆ. ಶಿಕ್ಷಣ ತಿರಸ್ಕೃತ ಸಮಾಜಕ್ಕೆ ಬಹುದೊಡ್ಡ ಶಕ್ತಿಯನ್ನು ತಂದುಕೊಡುತ್ತದೆ. ಆತ್ಮವಿಶ್ವಾಸವನ್ನು ತುಂಬುತ್ತದೆ. ತನ್ನ ಮತ್ತು ತನ್ನ ಸುತ್ತಲಿರುವ ಸಂಸ್ಕೃತಿಯ ಮಿತಿಗಳನ್ನು ಮುರಿಯಲು, ಮೀರಲು ರೂಪಾಂತರಿಸಲು ಪ್ರತಿ ಸೃಷ್ಟಿಸಲು ದಾರಿ ಮಾಡಿಕೊಡುತ್ತದೆ. ಕಲಿತ ಬುಡಕಟ್ಟುಗಳು ಆಫ್ರಿಕಾದಂತಹ ದೇಶಗಳಲ್ಲಿ ಎಂತಹ ಎತ್ತರವನ್ನು ತಲುಪಬಲ್ಲವೆಂಬುದನ್ನು ತೋರಿಸಿವೆ. ಭಾರತದಲ್ಲಿ ನಿಧಾನವಾಗಿಯಾದರೂ ಶೈಕ್ಷಣಿಕ ರೂಪಾಂತರಗಳಿಗೆ ಈ ಎಲ್ಲಾ ಬಗೆಯ ಸಮುದಾಯಗಳು ಒಳಗಾಗುತ್ತಿವೆ. ಶಿಕ್ಷಣಕ್ಕೆ ರೂಪಾಂತರಗೊಳ್ಳುವುದರಿಂದ ತನ್ನ ಸಂಸ್ಕೃತಿಯಿಂದ ದೂರಸಾಗುವ ಸಾಧ್ಯತೆಗಳು ಇರಬಲ್ಲವಾದರೂ ಅದರ

ಅಭಿವೃದ್ಧಿಯ ಹಾದಿಯಲ್ಲಿ ಅವರನ್ನು ಸಕಾರಾತ್ಮಕವಾಗಿಯೇ ಎಚ್ಚರದಿಂದ ಪರಿಶೀಲಿಸಬೇಕಾಗುತ್ತದೆ. ನಮ್ಮ ಶೋಷಿತ ಸಮುದಾಯಗಳಿಗೆ ಶಿಕ್ಷಣದ ಆಯುಧಗಳಿಂದ ಬೌದ್ಧಿಕ ಸವಾಲುಗಳನ್ನು ಎದುರುಗೊಂಡಿರುವುದನ್ನು ಚರಿತ್ರೆಯ ಪರ್ಯಾಯ ಕ್ರಮ ಎಂದು ತಿಳಿಯಬಹುದು. ಹೀಗಾಗಿಯೇ ಬಹುಪಾಲು ಎಲ್ಲಾ ಜಾತಿಗಳು ಕಡ್ಡಾಯ ಶಿಕ್ಷಣ ಸವಲತ್ತುಗಳಿಗೂ ಅದರ ಪ್ರಕ್ರಿಯೆಗೂ ತೆರೆದುಕೊಂಡು ಆ ಬಗ್ಗೆ ಒತ್ತಾಯಗಳನ್ನು ತರುವುದು. ಹೀಗೆ ಶಿಕ್ಷಣಕ್ಕೆ ಒಳಗಾಗುವುದರಿಂದಲೇ ಕೆಳಜಾತಿ, ಶೋಷಿತ ಸಮುದಾಯಗಳ ಸಾಂಸ್ಕೃತಿಕ ಲೋಕ ವಿಸ್ತಾರವಾಗುತ್ತಾ ಹೊಸ ರೂಪ ಸೌಂದರ್ಯಗಳನ್ನು ತುಂಬಿಕೊಳ್ಳುತ್ತದೆ. ಬೌದ್ಧಿಕ ಎಲ್ಲೆಗಳು ವಿಸ್ತರಿಸಿಕೊಳ್ಳುತ್ತವೆ. ಅಂಬೇಡ್ಕರ್ ಇದಕ್ಕೊಂದು ಅತ್ಯುತ್ತಮ ಸಾಕ್ಷಿ. ಸಮಾಜದ ವಿರೂಪವನ್ನು ಧೂರ್ತತೆಯನ್ನು ವ್ಯಾಖ್ಯಾನಿಸುವ ಶಕ್ತಿಯನ್ನು ಶಿಕ್ಷಣವು ನಿರ್ಮಿಸುತ್ತದೆ. ತನ್ನ ಎಲ್ಲಾ ಬಗೆಯ ಅಪಮಾನ, ಸೋಲು, ಹಿಂಸೆ ಹಸಿವುಗಳನ್ನು ನಿರೂಪಿಸುವ ಚೈತನ್ಯವನ್ನು ಶಿಕ್ಷಣ ತಂದುಕೊಡುತ್ತದೆ. ಶಿಕ್ಷಣದ ಮೂಲಕ ಹೊಸ ರೂಪ ಪಡೆದ ದಲಿತ ಯಾವ ಸವಾಲನ್ನಾದರೂ ನಿಭಾಯಿಸಬಲ್ಲ. ಎಲ್ಲರಿಂದಲೂ ಆಳಿಸಿಕೊಂಡರು. ಎಲ್ಲರಿಂದಲೂ ತುಳಿಸಿಕೊಂಡರು. ಎಲ್ಲರಿಂದಲೂ ಅಪಮಾನಿತರಾದವರು. ಎಲ್ಲರಿಂದಲೂ ವಂಚನೆಗೆ ಒಳಗಾದವರು. ಎಲ್ಲರಿಂದಲೂ ತಿರಸ್ಕಾರಕ್ಕೆ ಒಳಗಾಗಿ ಪ್ರೀತಿಯಿಂದ ಮಾನವೀಯತೆಯಿಂದ ವಂಚಿತರಾದವರು ಅತ್ಯಂತ ಕಠೋರವಾದ ತಾಳಿಕೆಯ ಗುಣವನ್ನು ಪಡೆದಿರುತ್ತಾರೆ. ಗಾಢವಾದ ಪ್ರತಿರೋಧ ಶಕ್ತಿಯನ್ನು ತಮ್ಮ ಸಂಸ್ಕೃತಿಯ ಗರ್ಭದಲ್ಲೇ ತುಂಬಿಕೊಂಡಿರುತ್ತಾರೆ. ಅಂತಹ ಸಮುದಾಯಗಳು ಸುಮ್ಮನೇ ಕಣ್ಮರೆಯಾಗಿ ಹೋಗುವುದಿಲ್ಲ. ಭಾರತದ ದಲಿತ ಜಗತ್ತು ಇಂಥದ್ದು. ಎಲ್ಲರಿಂದಲೂ ಬಗೆಬಗೆಯ ಅನುಭವವನ್ನು ಪಡೆದ ಜನಾಂಗಗಳು, ಜಾತಿಗಳು ಎಲ್ಲರ ಅಂತರಾಳಗಳನ್ನು ಅಳೆಯಬಲ್ಲವು, ಅರಿಯಬಲ್ಲವು. ಶೈಕ್ಷಣಿಕ ಮಾದರಿಗಳು ಸೂಕ್ತವಾದ ರೀತಿಯಲ್ಲಿ ಇನ್ನೂ ದಲಿತರನ್ನು ಸರಿಯಾಗಿ ತಲುಪಿಲ್ಲ. ಅವುಗಳ ಅಗಾಧವಾದ ಸಾಂಸ್ಕೃತಿಕ ಅನುಭವಗಳು ಮತ್ತು ಶೋಷಣೆಯಿಂದ ಕಲಿತ ಪಾಠಗಳು ಅಂತಿಮವಾಗಿ ಈ ಸಮುದಾಯಗಳು ದಾರಿ ತಪ್ಪಿದರೂ ಎಚ್ಚರಿಕೆಯಿಂದ ತಿದ್ದಿಕೊಳ್ಳುವಂತೆ ಮಾಡಬಲ್ಲದು. ಆದುದರಿಂದ ಶಿಕ್ಷಣವು ಪ್ರತಿಯೊಬ್ಬ ಮಾನವರ ವ್ಯಕ್ತಿತ್ವವನ್ನು ಸುಶಿಕ್ಷಿತ ಮತ್ತು ಉತ್ತಮ ಸಾಮಾಜಿಕ ಕಳಕಳಿಯನ್ನು ಹೊಂದಿದವರನ್ನಾಗಿ ಮಾಡುವುದಲ್ಲದೆ ಜವಾಬ್ದಾರಿಯುತವಾದ ಎಚ್ಚರಿಕೆಯನ್ನು ವಹಿಸುವಂತೆ ಮಾಡುತ್ತದೆ. ವಿಸ್ತಾರವಾಗಿ ಆಲೋಚಿಸಿದರೆ ನಮ್ಮ ಜೀವಿತ ಕಾಲದಲ್ಲಿ ಜ್ಞಾನ ಮತ್ತು ಜೀವನ ಇವು ಶಿಕ್ಷಣದ ಪ್ರಮುಖ ವಿಷಯಗಳು. ಏಕೆಂದರೆ ನಿಜವಾದ ಜ್ಞಾನವು ಮಾನವ ಜೀವನದ ಸ್ಥಿತಿಯನ್ನು ಉತ್ತಮಪಡಿಸುವುದು. ಈ ದೃಷ್ಟಿಯಿಂದ ಇಂದಿಗೂ ಹೆಚ್ಚಿನ ಪ್ರಮಾಣದಲ್ಲಿ ರೈತರು, ಕಾರ್ಮಿಕರು, ದಲಿತರು, ಬಡವರು, ಬುಡಕಟ್ಟು ಜನರಿಗೆ ಹೆಚ್ಚಿನ ಪ್ರಮಾಣದಲ್ಲಿ ಶಿಕ್ಷಣವು ಪ್ರಧಾನವಾಗಿ ದೊರಕಬೇಕಾಗಿದೆ.[೨೨]

### ೫.೨.೧. ವಿದ್ಯಾ ಸಂಸ್ಥೆಗಳ ಸ್ಥಾಪನೆ

ಪ್ರತಿಯೊಬ್ಬ ಮನುಷ್ಯನಿಗೂ ಸಹ ಶಿಕ್ಷಣ ಪ್ರಮುಖವಾಗಿ ಬೇಕೇಬೇಕು. ಭಾರತೀಯ ಸಾಮಾಜಿಕ ರಚನೆಯಲ್ಲಿ ಕೆಳವರ್ಗದ ಜನರು ಶಿಕ್ಷಣ ಪಡೆಯಲು ಒಂದಲ್ಲಾ ಒಂದನ್ನು ಆಶ್ರಯಿಸಲೇಬೇಕು.

ಇದರಿಂದಲೇ ತಮ್ಮ ತಮ್ಮ ಅವಶ್ಯಕತೆ, ಆಸೆ, ಆಕಾಂಕ್ಷೆಗಳನ್ನು ಪೂರೈಸಿಕೊಳ್ಳಲು ಸಾಧ್ಯಗುವುದು ಸಮಾಜವು ವ್ಯಕ್ತಿಗಳಿಗೆ ಒದಗಿಸುವ ಶಿಕ್ಷಣವೇ ಇದಕ್ಕೆ ಕಾರಣವಾಗಿರುವುದು. ಮಾನವನು ಮತ್ತೊಬ್ಬನೊಡನೆ ಸಮಾನತೆ, ಸಮಾನ ಭಾವನೆ, ಸಮಾನ ಉದ್ದೇಶ, ಸಹಾನುಭೂತಿ, ಸಹಬಾಳ್ವೆ, ಸಹಕಾರ ಮನೋಭಾವನೆ ಮುಂತಾದ ಲಕ್ಷಣಗಳನ್ನು ಹೊಂದಿರುತ್ತಾನೆ.[೨೩] ಈ ಮಾನವೀಯ ಗುಣಗಳು ಬೆಳೆಯಬೇಕಾದರೆ ಶಿಕ್ಷಣವು ಅತ್ಯಗತ್ಯ. ಒಂದರ್ಥದಲ್ಲಿ ಉತ್ತಮ ಶಿಕ್ಷಣವು ದೊರಕದಿದ್ದ ಪಕ್ಷದಲ್ಲಿ ಉತ್ತಮ ಪ್ರಜೆಯಾಗಿ ಬಾಳುವುದಕ್ಕೆ ಸಾಧ್ಯವಾಗುವುದಿಲ್ಲ. ಸಮಾಜವು ರೂಪಿತವಾಗಿ ಮುಂದುವರಿಯಬೇಕಾದರೆ ಹಲವಾರು ಸೂಕ್ತವಾದ ಕಾನೂನು ನಿಯಮಗಳು ಅಗತ್ಯ. ಅವುಗಳನ್ನು ಅನುಸರಿಸುವುದು ಸಹ ಅಷ್ಟೇ ಅವಶ್ಯಕವಾದದ್ದು. ಇದನ್ನು ಪರಿಚಯ ಮಾಡಿಸುವುದೇ ಶಿಕ್ಷಣದ ಹೊಣೆಯಾಗಿರುತ್ತದೆ. ಮಾನವನಿಗೆ ಈ ನಿಯಮಗಳನ್ನು, ಮೌಲ್ಯಗಳನ್ನು ಪರಿಪಾಲಿಸಲು ಆಸಕ್ತಿ ಇರುವುದರಿಂದಲೇ ಸಮಾಜವು ಸ್ಥಾಪನೆಯಾಗಿರುವುದು, ಶಾಲಾ ಸಂಸ್ಥೆಗಳು ಸಹ ಇದರಲ್ಲಿ ಹೆಚ್ಚಿನ ಜವಾಬ್ದಾರಿಯನ್ನು ತೆಗೆದುಕೊಂಡಿರುವುದು.

ಮಾನವನ ಬೆಳವಣಿಗೆಗೆ ಮೂಲಭೂತ ಬೇಡಿಕೆಗಳಾದ ಆಹಾರ, ಉಡುಪು, ಆಶ್ರಯಗಳು ಹೇಗೆ ಅಗತ್ಯವೊ ಹಾಗೆಯೇ ಶಿಕ್ಷಣವು ಸಹ ಅಷ್ಟೇ ಅಗತ್ಯವಾಗಿರುವುದು. ಶಿಕ್ಷಣದ ನೆರವು ನಿರಂತರವಾದದ್ದು ವ್ಯಕ್ತಿಯು ಉತ್ತಮ ಶಿಕ್ಷಣದ ಮೂಲಕ ಯೋಗ್ಯವಾದ ಪರಿವರ್ತನೆಯನ್ನು ಹೊಂದಬಲ್ಲದು. ಶಿಕ್ಷಣದ ಮೂಲಕ ಉತ್ತಮ ಜ್ಞಾನಾರ್ಜನೆ ಉಂಟಾಗುವುದು. ಸಮಾಜದ ಪರಿಸ್ಥಿತಿಯನ್ನು ಅರಿತುಕೊಂಡು ಪ್ರಗತಿ ಸಾಧಿಸುವುದಕ್ಕೆ ಅನುಕೂಲವಾಗುವುದು. ಇದರ ಜೊತೆಗೆ ಸಾಮಾಜಿಕ ವ್ಯವಸ್ಥೆಗಳ ಪರಿಚಯ ಉಂಟಾಗುವುದು. ಶಿಕ್ಷಣದ ಮಹತ್ವ ಅದರ ಅವಶ್ಯಕತೆಯನ್ನು ಚನ್ನಿಗರಾಮಯ್ಯನವರು ಮನಗಂಡಿದ್ದರು. ಶಿಕ್ಷಣದ ಮುಖಾಂತರ ಸಾಮಾಜಿಕ ಪರಿವರ್ತನೆಯನ್ನು ಉಂಟುಮಾಡಬಹುದೆಂಬ ಅರಿವು ಅವರಲ್ಲಿ ಮೂಡಿತ್ತು.[೨೪] ಇವರಿಗೆ ಶಿಕ್ಷಣದ ಮೇಲೆ ಅಪಾರವಾದ ಕಾಳಜಿಯಿತ್ತು. ಏಕೆಂದರೆ ಇವರ ತಂದೆಯವರು ಪ್ರಾಥಮಿಕ ಶಾಲೆಯ ಮುಖ್ಯೋಪಾಧ್ಯಾಯರಾಗಿದ್ದು, ಎಲ್ಲಾ ವರ್ಗದ ಜನರಲ್ಲಿ ಶಿಕ್ಷಣವನ್ನು ಪಡೆಯುವಂತೆ ಪ್ರೇರೇಪಿಸುತ್ತಿದ್ದರು. ಇದರಿಂದಾಗಿ ಸುತ್ತಮುತ್ತಲಿನ ಹಳ್ಳಿಗಳಲ್ಲಿ ಸುಸಂಸ್ಕೃತ ವ್ಯಕ್ತಿಯೆಂದು ಹೆಸರು ಪಡೆದಿದ್ದರು. ಹೀಗಾಗಿ ಚನ್ನಿಗರಾಮಯ್ಯ ಅವರಿಗೆ ಶಿಕ್ಷಣದ ಮೇಲೆ ಒಲವನ್ನು ಬೆಳಸಿಕೊಳ್ಳಲು ಸಹಕಾರಿಯಾಯಿತು. ಇವರಿಗೆ ದೊರೆತ ವಿದ್ಯಾಭ್ಯಾಸ ಬಹಳ ಕಡಿಮೆಯಾದರೂ ಅಪಾರವಾದ ಜ್ಞಾನ ಸಂಪತ್ತನ್ನು ಹೊಂದಿದ್ದರು. ಸ್ವತಃ ಚನ್ನಿಗರಾಮಯ್ಯನವರೇ ಮನೆಪಾಠಕ್ಕೆ ಇಂಗ್ಲಿಷ್ ಶಿಕ್ಷಕರನ್ನು ನೇಮಿಸಿಕೊಂಡು ಇಂಗ್ಲಿಷ್‌ನ ಜ್ಞಾನ ಪಡೆದು ಇಂಗ್ಲಿಷ್‌ನಲ್ಲಿ ಭಾಷಣ ಮಾಡುವ ಕಲೆಯನ್ನು ಕರಗತ ಮಾಡಿಕೊಂಡಿದ್ದರು. 'ಬದುಕನ್ನು ಪರಿವರ್ತಿಸುವ ಸಾಧನ ಶಿಕ್ಷಣ. ಆದ್ದರಿಂದ ದಲಿತರಿಗೆ ಶಿಕ್ಷಣವನ್ನು ನೀಡಿದರೆ ಸಮಾಜದಲ್ಲಿ ಯಾವುದೇ ಕ್ಷೇತ್ರದಲ್ಲಿ ತಮ್ಮ ಬದುಕನ್ನು ಹಸನು ಮಾಡಿಕೊಳ್ಳುತ್ತಾರೆ. ಶಿಕ್ಷಣ ದೊರೆತರೆ ಅವರ ಸ್ಥಿತಿಯು ಉತ್ತಮಗೊಂಡು ಶೋಷಣೆಯ ವಿರುದ್ಧ ಸೆಟೆದು ನಿಲ್ಲುವಂಥ ಸಾಮರ್ಥ್ಯವು ದೊರೆಯುತ್ತದೆ. ಹಾಗಾಗಿ ದಲಿತ ವಿದ್ಯಾರ್ಥಿಗಳಿಗೆ ಅಗತ್ಯ ಸೌಲಭ್ಯ ಒದಗಿಸಿದರೆ ಶಿಕ್ಷಣ ಪಡೆಯಲು ಮುಂದಾಗುತ್ತಾರೆ' ಎಂದು ಚಿಂತನೆ ನಡೆಸಿ ದಲಿತ ಜನಾಂಗದವರ

ಆರ್ಥಿಕ ಸಾಮಾಜಿಕ ಸ್ಥಿತಿಗತಿಗಳ ಸುಧಾರಣೆಗಾಗಿ ಮತ್ತು ದಲಿತ ಮಕ್ಕಳ ವಿದ್ಯಾಭ್ಯಾಸಕ್ಕೆ ಶಾಶ್ವತ ಪರಿಹಾರ ದೊರೆಯುವಂತೆ ಶ್ರಮ ವಹಿಸಿದ್ದರು. ಜವಾಬ್ದಾರಿ ಸರ್ಕಾರ ರಚನೆಯಾದ ನಂತರ, ಶಿಕ್ಷಣ ಮಂತ್ರಿಯಾಗಿ ಚನ್ನಿಗರಾಮಯ್ಯ ಅವರು ಅನೇಕ ಶೈಕ್ಷಣಿಕ ಕಾರ್ಯ ಮಾಡಿದರು. ವಿದ್ಯಾರ್ಥಿ ವೇತನ ಸೌಲಭ್ಯ, ವಿದ್ಯಾರ್ಥಿ ನಿಲಯಗಳ ಸ್ಥಾಪನೆ, ಜನಸಂಖ್ಯೆಗೆ ಅನುಗುಣವಾಗಿ ಪ್ರಾಥಮಿಕ ಮತ್ತು ಮಾಧ್ಯಮಿಕ ಶಾಲೆಗಳನ್ನು ಹೆಚ್ಚು ಮಾಡುತ್ತಾ ಹೋದರು. ಹೀಗೆ ಹಲವಾರು ಸೌಲಭ್ಯಗಳನ್ನು ನೀಡುವುದರ ಮೂಲಕ ವಿದ್ಯಾರ್ಥಿಗಳ ಸಂಖ್ಯೆಯನ್ನು ಹೆಚ್ಚಿಸಲು ಪ್ರಯತ್ನಿಸಿದರು. ಅನೇಕ ದಾನಿಗಳು ಉದಾರ ಮನಸ್ಸಿನಿಂದ ವಿದ್ಯಾಭ್ಯಾಸದಲ್ಲಿ ಆಸಕ್ತಿ ಇದ್ದುದರಿಂದ ತಾವೇ ತಾವಾಗಿ ಮುಂದೆ ಬಂದು ಧನಸಹಾಯ ನೀಡಿ ಬಹಳ ಮುತುವರ್ಜಿ ವಹಿಸಿ ಕಟ್ಟಡಗಳನ್ನು ಕಟ್ಟಿಸಿಕೊಟ್ಟರು. ಚನ್ನಿಗರಾಮಯ್ಯ ಅವರು ಅಂತಹ ಕಟ್ಟಡಗಳನ್ನು ಕಟ್ಟಿಸಿದ ಹಳ್ಳಿಗಳಿಗೆ ಶಾಲೆಯನ್ನು ಮಂಜೂರು ಮಾಡಿಸಿಕೊಟ್ಟರು. ಏಕೆಂದರೆ ಎಲ್ಲಾ ಕಡೆಗಳಲ್ಲಿಯೂ ಸರ್ಕಾರವೇ ಕಟ್ಟಡಗಳನ್ನು ಕಟ್ಟಿ ಶಾಲೆಯನ್ನು ತೆರೆಯುವುದು ಬಹಳ ಸಮಯ ಬೇಕಾಗುತ್ತಿತ್ತು. ಆದುದರಿಂದ ಸಾರ್ವಜನಿಕರೇ ಹಣವನ್ನು ನೀಡಿ ಕಟ್ಟಡಗಳನ್ನು ನಿರ್ಮಿಸಿದರೆ ಅಂತಹ ಹಳ್ಳಿಗಳಿಗೆ ಶಾಲೆಯನ್ನು ಮಂಜೂರು ಮಾಡಿ ಅಗತ್ಯ ಸೌಲಭ್ಯಗಳನ್ನು ಒದಗಿಸಲಾಗುತ್ತಿತ್ತು. ಪ್ರಾಥಮಿಕ ಶಿಕ್ಷಣವನ್ನು ಮುಗಿಸಿದ ನಂತರ ಪ್ರೌಢಶಿಕ್ಷಣಕ್ಕೆ ವಿದ್ಯಾರ್ಥಿಗಳ ಅಂದಿನ ದಿನಗಳಲ್ಲಿ ತುಂಬಾ ದೂರದ ಸ್ಥಳಗಳಿಗೆ ಹೋಗಿ ವಿದ್ಯಾಭ್ಯಾಸ ಮಾಡಬೇಕಾಗಿತ್ತು. ಇದು ಆರ್ಥಿಕವಾಗಿ ಹೆಚ್ಚು ಹೊರೆಯಾಗಿತ್ತು ಮತ್ತು ದೂರದ ಸ್ಥಳಗಳಿಗೆ ಮಕ್ಕಳನ್ನು ವಿದ್ಯಾಭ್ಯಾಸಕ್ಕೆ ಕಳುಹಿಸಲು ಪೋಷಕರು ಒಪ್ಪುತ್ತಿರಲಿಲ್ಲ. ಇದರಿಂದಾಗಿ ಹೆಚ್ಚಿನ ಮಕ್ಕಳ ವಿದ್ಯಾಭ್ಯಾಸ ಅರ್ಧಕ್ಕೆ ಮೊಟಕುಗೊಳ್ಳುತ್ತಿತ್ತು. ಇಂತಹ ಸಮಸ್ಯೆಗಳನ್ನು ಅರಿತ ಚನ್ನಿಗರಾಮಯ್ಯನವರು ಆ ಪ್ರದೇಶಗಳಿಗೆ ಹೆಚ್ಚು ಹೆಚ್ಚು ಹೈಸ್ಕೂಲ್‌ಗಳನ್ನು ಮಂಜೂರು ಮಾಡಿಸಿದರು. ಇವರು ೧೯ನೇ ಆಗಸ್ಟ್ ೧೯೬೫ರಂದು ಕೊರಟಗೆರೆಯಲ್ಲಿ ಸರ್ಕಾರಿ ಹೈಸ್ಕೂಲ್ ಮಂಜೂರು ಮಾಡಿಸಿ ಕಟ್ಟಡದ ಶಂಕುಸ್ಥಾಪನೆಯನ್ನು ನೆರವೇರಿಸಿದರು. ನಂತರದ ದಿನಗಳಲ್ಲಿ ಹೈಸ್ಕೂಲ್ ಮುಗಿಸಿದ ವಿದ್ಯಾರ್ಥಿಗಳಿಗೆ ಮುಂದಿನ ವಿದ್ಯಾಭ್ಯಾಸಕ್ಕೆ ಅನುಕೂಲವಾಗುವಂತೆ ಸರ್ಕಾರಿ ಪದವಿಪೂರ್ವ ಕಾಲೇಜನ್ನು ಮಂಜೂರು ಮಾಡಿಸಿದರು. ಪ್ರತಿಯೊಂದು ಸಮುದಾಯ ಶಿಕ್ಷಣ ಅತ್ಯಾವಶ್ಯಕವೆಂದು ಅದರ ಮಹತ್ವವನ್ನು ತಿಳಿಯಪಡಿಸುತ್ತಿದ್ದರು. ದಲಿತ ಜನಾಂಗದ ವಿದ್ಯಾರ್ಥಿಗಳ ವಿದ್ಯಾಭ್ಯಾಸಕ್ಕೆ ಹೆಚ್ಚು ಆದ್ಯತೆ ನೀಡುತ್ತಿದ್ದರು. ದಲಿತ ಕೇರಿಗಳಿಗೆ ಪ್ರವಾಸ ಮಾಡಿ ದಲಿತರ ಮನವೊಲಿಸಿ ತಮ್ಮ ಮಕ್ಕಳನ್ನು ಶಾಲೆಗೆ ಸೇರಿಸುವಂತೆ ಮನವಿ ಮಾಡುತ್ತಿದ್ದರು. ಅಲ್ಲದೆ ಅವಶ್ಯಕತೆ ಇರುವ ಕಡೆಗಳಲ್ಲಿ ಶಾಲಾ ಕಾಲೇಜುಗಳನ್ನು ಇವರ ಅಧಿಕಾರಾವಧಿಯಲ್ಲಿ ಮಂಜೂರು ಮಾಡಿಸಿ ಅದಕ್ಕೆ ಅಗತ್ಯವಾದ ಸೌಕರ್ಯಗಳನ್ನು ಉಪಾಧ್ಯಾಯರನ್ನು ಒದಗಿಸುತ್ತಿದ್ದರು. ಹೀಗೆ ಚನ್ನಿಗರಾಮಯ್ಯನವರು ದಲಿತರ ಹಾಗೂ ಇತರ ವರ್ಗಗಳ ವಿದ್ಯಾಭ್ಯಾಸಕ್ಕೆ ಅನೇಕ ಕ್ರಮಗಳನ್ನು ಕೈಗೊಂಡು ಚಿಂತನೆಗಳನ್ನು ನಡೆಸಿ ಅವರಲ್ಲಿದ್ದ ಶೈಕ್ಷಣಿಕ ಚಿಂತನೆಗಳನ್ನು ಅನುಷ್ಠಾನಗೊಳಿಸಲು ಪ್ರಯತ್ನಿಸಿದ ಅಪರೂಪದ ವ್ಯಕ್ತಿಯಾಗಿದ್ದಾರೆ.[೨೫]

### ೫.೩.೩. ವಿದ್ಯಾರ್ಥಿ ನಿಲಯಗಳ ಸ್ಥಾಪನೆ

ಚನ್ನಿಗರಾಮಯ್ಯನವರು ದಲಿತರ ಮಕ್ಕಳಿಗೆ ವಿದ್ಯಾಭ್ಯಾಸವನ್ನು ಒದಗಿಸಲು ಹಲವಾರು ವಿದ್ಯಾರ್ಥಿ ನಿಲಯಗಳನ್ನು ಸ್ಥಾಪಿಸಿದರು. ದಲಿತ ಸಮುದಾಯಗಳ ಸ್ಥಿತಿ ಶೋಚನೀಯ ಮಟ್ಟದಲ್ಲಿದೆ. ತಮ್ಮ ಮಕ್ಕಳಿಗೆ ವಿದ್ಯಾಭ್ಯಾಸವನ್ನು ಕೊಡಿಸಲು ಅಶಕ್ತರಾಗಿದ್ದರೆ ಅಂತಹ ಮಕ್ಕಳಿಗೆ ಊಟ, ವಸತಿ ಸೌಲಭ್ಯಗಳನ್ನಾದರೂ ಒದಗಿಸಿದರೆ, ಶಿಕ್ಷಣ ಪಡೆಯಲು ಮುಂದೆ ಬರುತ್ತಾರೆ ಎಂದು ಯೋಚಿಸುತ್ತಿದ್ದರು. ಏಕೆಂದರೆ ಚನ್ನಿಗರಾಮಯ್ಯನವರು ಕೋಟೆ ಹೈಸ್ಕೂಲಿನಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದ ಸಂದರ್ಭದಲ್ಲಿ ೧೯೨೩ರಲ್ಲಿ ಗೋಪಾಲಸ್ವಾಮಿ ಅಯ್ಯರ್ ಅವರು ಬೆಂಗಳೂರಿನಲ್ಲಿ ೧೨ ಜನ ವಿದ್ಯಾರ್ಥಿಗಳಿಗಾಗಿ ಯುವರಾಜರ ಒಪ್ಪಿಗೆ ಪಡೆದು ಪಂಚಮರ ಬೋರ್ಡಿಂಗ್ ಹೋಂ ಅನ್ನು ಸ್ಥಾಪಿಸಿದರು. ಈ ವಿದ್ಯಾರ್ಥಿ ನಿಲಯವನ್ನು ಇಂದು ನರಸಿಂಹರಾಜ ಹಾಸ್ಟೆಲ್ ಎಂದು ಕರೆಯಲಾಗುತ್ತಿದೆ. ಈ ವಿದ್ಯಾರ್ಥಿ ನಿಲಯವನ್ನು ಚಾಮರಾಜಪೇಟೆಯಲ್ಲಿರುವ ಟಿಪ್ಪು ಅರಮನೆಯ ಪಕ್ಕಕ್ಕೆ ವರ್ಗಾಯಿಸಲಾಗಿದೆ. ಹಿಂದೆ ಈ ಸ್ಥಳವು ಕುದುರೆಗಳ ಲಾಯವಾಗಿತ್ತು. ಇದ್ದ ಮೂರು ಲಾಯಗಳನ್ನು ವಿದ್ಯಾರ್ಥಿ ನಿಲಯವನ್ನಾಗಿ ಪರಿವರ್ತಿಸಿ ಒಂದೊಂದು ಲಾಯದಲ್ಲಿ ೧೮ರಿಂದ ೨೦ ವಿದ್ಯಾರ್ಥಿಗಳು ಇರುವ ಹಾಗೆ ಮಾರ್ಪಡಿಸಲಾಗಿತ್ತು. ಇದು ಸಹ ಎಲ್ಲಾ ಬೋರ್ಡಿಂಗ್ ಹೋಂಗಳಂತೆ ಉಚಿತ ವಿದ್ಯಾರ್ಥಿ ನಿಲಯವಾಗಿದ್ದು ೬೦-೭೦ ವಿದ್ಯಾರ್ಥಿಗಳಿಗೆ ಪ್ರವೇಶಾವಕಾಶವನ್ನು ಕಲ್ಪಿಸಿಕೊಡಲಾಯಿತು. ಈ ವಿದ್ಯಾರ್ಥಿ ನಿಲಯದಲ್ಲಿ ಶಿಕ್ಷಣ ಪಡೆದ ಕೊರಟಗೆರೆಯ ಆರ್.ಚನ್ನಿಗರಾಮಯ್ಯ ಸಹ ಒಬ್ಬರು.[೨೬] ಇವರು ವಿದ್ಯಾರ್ಥಿ ನಿಲಯದಲ್ಲಿ ವ್ಯಾಸಂಗ ಮಾಡಿದ್ದರಿಂದಾಗಿ ವಿದ್ಯಾರ್ಥಿ ನಿಲಯಗಳ ಅವಶ್ಯಕತೆ, ಅದರ ಮಹತ್ವ ಚೆನ್ನಾಗಿ ತಿಳಿದಿದ್ದರು. ಪಂಚಮರ ಗೋಪಾಲಸ್ವಾಮಿ ಅಯ್ಯರ್ ಅವರಿಂದ ಪ್ರೇರಣೆಗೊಂಡು ವಿದ್ಯಾರ್ಥಿ ನಿಲಯಗಳ ಸ್ಥಾಪನೆಗೆ ಮುಂದಾದರು. ಮೈಸೂರು ಸಂಸ್ಥಾನದ ಆದಿ ಜಾಂಬವಾಭಿವೃದ್ಧಿ ಸಂಘದ ವಿದ್ಯಾರ್ಥಿ ನಿಲಯದ ಶಂಕುಸ್ಥಾಪನೆಯನ್ನು ಮಾಗಡಿ ರಸ್ತೆಯಲ್ಲಿ ೭ ಜನವರಿ ೧೯೩೪ರ ಭಾನುವಾರ ಬೆಳಿಗ್ಗೆ ಗಾಂಧೀಜಿಯವರಿಂದ ಮಾಡಿಸಿದರು. ಕಟ್ಟಡ ಸಿದ್ಧವಾಗುವಂತೆ ದುಡಿದರು. ಈ ಹೆಸರು ಜಾತಿ ಸೂಚಕವಾಗುತ್ತದೆ ಎಂದು ನಂತರದಲ್ಲಿ ಬಾಪೂಜಿ ವಿದ್ಯಾರ್ಥಿ ನಿಲಯ ಎಂದು ಹೆಸರಿಟ್ಟರು. ವಿದ್ಯಾರ್ಥಿಗಳಿಗೆ ಅಗತ್ಯವಾದ ಸೌಲಭ್ಯವನ್ನು ಒದಗಿಸುವಲ್ಲಿ ಸಫಲರಾದರು. ಜವಾಬ್ದಾರಿ ಸರ್ಕಾರ ಸ್ಥಾಪನೆಯಾದ ನಂತರದಲ್ಲಿ ಮಂತ್ರಿಗಳಾಗಿ ಸಮಾಜ ಕಲ್ಯಾಣ ಇಲಾಖೆಯಲ್ಲಿಅನೇಕ ಸುಧಾರಣೆಗಳನ್ನು ಮಾಡಿದರು.[೨೭] ರಾಜ್ಯದ ಅನೇಕ ಕಡೆಗಳಲ್ಲಿ ವಸತಿ ನಿಲಯಗಳನ್ನು ಸ್ಥಾಪಿಸಿ ಅವುಗಳಿಗೆ ಅಗತ್ಯವಾದ ಮೂಲಭೂತ ಸೌಕರ್ಯಗಳನ್ನು ಕಲ್ಪಿಸಿಕೊಟ್ಟರು. ವಿದ್ಯಾರ್ಥಿ ವೇತನವನ್ನು ಹೆಚ್ಚಳ ಮಾಡಿದರು. ವಸತಿ ನಿಲಯಗಳ ನಿರ್ವಹಣೆಗೆ ಮತ್ತು ಶಿಕ್ಷಣಕ್ಕೆ ಹೆಚ್ಚಾಗಿ ಹಣ ಬಜೆಟ್‌ನಲ್ಲಿ ಒದಗಿಸಲು ಸಹಕರಿಸುತ್ತಿದ್ದರು. ವಿದ್ಯಾಭ್ಯಾಸಕ್ಕೆ ಪ್ರೋತ್ಸಾಹ ನೀಡುತ್ತಿದ್ದರು. ವಿದ್ಯಾಭ್ಯಾಸಕ್ಕೆ ಉತ್ತೇಜನ ಕೊಡಲು ಸರ್ಕಾರದವರು ಪ್ರಯತ್ನ ಪಡುತ್ತಾರೆ. ಅದರಲ್ಲೂ ಮೈಸೂರು ಸರ್ಕಾರದಲ್ಲಿ ಕಾಂಗ್ರೆಸ್ ಪಕ್ಷವು ಅಧಿಕಾರದಲ್ಲಿರುವಾಗ ಎಲ್ಲಾ ವಿಧದಲ್ಲೂ ದಲಿತರು, ಹಿಂದುಳಿದವರಿಗಾಗಿ ದುಡಿಯಬೇಕು ಎಂಬ ಅಭಿಲಾಷೆಯಿದೆ. ಇಂಥ ಸಂದರ್ಭದಲ್ಲಿ ವಿದ್ಯಾರ್ಥಿಗಳಿಗೆ ಯಾವ ವಿಧದಲ್ಲೂ ಕುಂದು ಕೊರತೆ ಬರುವುದಿಲ್ಲ,

ಸಹಾಯ ಮಾಡುತ್ತೇವೆ ಎಂಬ ಭರವಸೆಯನ್ನು ನೀಡುತ್ತಿದ್ದರು. ಇವರು ಪ್ರತ್ಯೇಕತಾ ಮನೋಭಾವವನ್ನು ಹೋಗಲಾಡಿಸಲು ಪ್ರಯತ್ನಿಸುತ್ತಿದ್ದರು. ಹಲವಾರು ವಿದ್ಯಾರ್ಥಿ ನಿಲಯಗಳಲ್ಲಿ ದಲಿತರು ಸವರ್ಣೀಯರು ಒಟ್ಟಿಗೆ ಇರಲು ಅವಕಾಶ ಮಾಡಿಕೊಟ್ಟಿದ್ದರು. ಸಮಾಜದಲ್ಲಿ ಐಕ್ಯತೆ ಸಾಮರಸ್ಯವನ್ನು ಮೂಡಿಸಲು ಪ್ರಯತ್ನಿಸುತ್ತಿದ್ದರು. ಪರಿಶಿಷ್ಟ ಜಾತಿ ಮತ್ತು ಪಂಗಡದವರ ವಿದ್ಯಾರ್ಥಿ ನಿಲಯಗಳಲ್ಲಿ ಕೆಲವು ಕಡೆ ಸವರ್ಣೀಯರಿಗೂ ಪ್ರವೇಶಾವಕಾಶವನ್ನು ಕಲ್ಪಿಸಿಕೊಟ್ಟಿದ್ದರು. ಸಮಾಜದಲ್ಲಿರುವ ಅಸಮಾನತೆ, ತಾರತಮ್ಯವನ್ನು ಹೋಗಲಾಡಿಸಲು ಅನೇಕ ರೀತಿಯಲ್ಲಿ ಶ್ರಮಿಸಿದರು. ಕೋಲಾರ, ತುಮಕೂರು, ಮೈಸೂರು ಮುಂತಾದ ಜಿಲ್ಲೆಗಳಲ್ಲಿ ವಿದ್ಯಾರ್ಥಿನಿಲಯಗಳನ್ನು ಸ್ಥಾಪಿಸಿ ಅನುದಾನವನ್ನು ಹೆಚ್ಚಿಸಿದರು. ಬಿಡುವಿನ ವೇಳೆಯಲ್ಲಿ ವಿದ್ಯಾರ್ಥಿ ನಿಲಯಗಳಿಗೆ ಭೇಟಿ ನೀಡುತ್ತಿದ್ದ ಚನ್ನಿಗರಾಮಯ್ಯನವರು ವಿದ್ಯಾರ್ಥಿಗಳ ಕುಂದುಕೊರತೆ ಮತ್ತು ಯೋಗಕ್ಷೇಮದ ಬಗ್ಗೆ ತಿಳಿದುಕೊಳ್ಳುತ್ತಾ ಸಮಸ್ಯೆಗಳಿಗೆ ಪರಿಹಾರಗಳನ್ನು ಕಂಡುಕೊಳ್ಳುತ್ತಿದ್ದರು. ವಿದ್ಯಾರ್ಥಿಗಳನ್ನು ಕುರಿತು 'ಯಾರನ್ನೂ ಅವಲಂಬಿಸದೇ ಸ್ವಶಕ್ತಿಯಿಂದ ಮುಂದುವರೆಯಿರಿ. ನಾನು ಯಾರಿಗೂ ಕೀಳಲ್ಲ ಎಂಬ ಮನೋಭಾವನೆಯನ್ನು ಬೆಳಸಿಕೊಳ್ಳಿ, ನಿಮ್ಮ ಸುತ್ತಮುತ್ತಲಿನ ಪರಿಸರವನ್ನು ನಿರ್ಮಲವಾಗಿಟ್ಟುಕೊಳ್ಳಿ, ಆತ್ಮಗೌರವವನ್ನು ಮಾರಿಕೊಂಡು ಅನ್ಯರಿಗೆ ಗೌರವ ತೋರುವುದು ಹೇಡಿತನ ಹಾಗೂ ನೀವು ಒಗ್ಗಟ್ಟಾಗಿದ್ದರೆ ಸತತ ಪ್ರಯತ್ನಶೀಲರಾಗಿದ್ದರೆ, ಛಲಗಾರರಾಗಿದ್ದರೆ ನಿಮ್ಮ ಪ್ರಯತ್ನಕ್ಕೆ ಜಯ ದೊರೆಯುತ್ತದೆ. ಹಾಗಾಗಿ ಪಠ್ಯಪುಸ್ತಕ, ವೃತ್ತಪತ್ರಿಕೆ, ನಿಯತಕಾಲಿಕೆಗಳನ್ನು ಓದುವ ಹವ್ಯಾಸವನ್ನು ಬೆಳಸಿಕೊಂಡು ಜ್ಞಾನ ಸಂಪಾದಿಸಿಕೊಳ್ಳಿ ಎಂದು ಸಲಹೆ ನೀಡುತ್ತಿದ್ದರು. ಅಲ್ಲದೇ ಥಿಯೋಸೊಫಿಕಲ್ ಸೊಸೈಟಿ, ರಾಮಕೃಷ್ಣ ಆಶ್ರಮ ಮತ್ತು ಬ್ರಹ್ಮ ಸಮಾಜ ಸಂಸ್ಥೆಗಳ ಕಾರ್ಯ ಕಲಾಪಗಳಲ್ಲಿ ಪಾಲ್ಗೊಳ್ಳಿ, ಅವುಗಳ ಸದಸ್ಯರಾಗಿ ನಿಮ್ಮ ವ್ಯಕ್ತಿತ್ವ, ವಿಚಾರ ವಿಕಸಿತವಾಗುತ್ತದೆ' ಎಂದು ಹೇಳುತ್ತಿದ್ದರು. ಈ ಸಂಸ್ಥೆಗಳಲ್ಲಿ ಹಿಂದೂ ಧರ್ಮದ ಇತರ ಮಠ ಮಾನ್ಯಗಳಂತೆ ಜಾತೀಯತೆಯಾಗಲಿ, ಮೇಲು ಕೀಳೆಂಬ ಭಾವನೆಯಿಲ್ಲವಾದ್ದರಿಂದ ಸಮಾಜದೊಂದಿಗೆ ಬೆರೆಯಬಹುದು, ವ್ಯವಹರಿಸಬಹುದು, ಇದರಿಂದಾಗಿ ಅಸ್ಪೃಶತೆ ತಾನಾಗಿಯೇ ಹೋಗುತ್ತದೆ ಎಂದು ಹೇಳುತ್ತಿದ್ದರು. ಹೀಗೆ ಚನ್ನಿಗರಾಮಯ್ಯನವರು ಕರ್ನಾಟಕ ರಾಜಕಾರಣದಲ್ಲಿ ದಲಿತರ ನೋವಿಗೆ ದನಿ ನೀಡಿದ ಪ್ರಥಮ ವ್ಯಕ್ತಿ. ಮಂತ್ರಿಯಾಗಿ ಅಸ್ಪೃಶ್ಯರ ಬದುಕಿನಲ್ಲಿ ಚೈತನ್ಯ ಸೃಷ್ಟಿಸಿದರು. ದಲಿತ ಮಕ್ಕಳಿಗೆ ವಿದ್ಯಾರ್ಥಿನಿಲಯ, ವಿದ್ಯಾರ್ಥಿವೇತನ ಮುಂತಾದ ಸೌಲಭ್ಯಗಳನ್ನು ದೊರೆಯುವಂತೆ ಮಾಡಿ ಅಸ್ಪೃಶ್ಯರ ಬಾಳಿಗೆ ಬುನಾದಿ ಹಾಕಿದರು.

೫.೩ ರಾಜಕೀಯ ಚಿಂತನೆಗಳು

ಭಾರತೀಯ ಸಮಾಜವು ಜಾತಿ ಮತ್ತು ವರ್ಗಗಳಿಂದ ಕೂಡಿದೆ. ಮೇಲ್ವರ್ಗದ ಜನ ಶೋಷಿತ ವರ್ಗದ ನಾಯಕತ್ವ ವಹಿಸಿದ್ದಾರೆ. ದೊಡ್ಡ ಬಂಡವಾಳದಾರರ ಹಾಗೂ ಭೂ ಮಾಲೀಕರ ವರ್ಚಸ್ಸು ರಾಜಕೀಯ ಪ್ರಭುತ್ವ ರಾಜ್ಯದಲ್ಲಿ ಎದ್ದು ಕಾಣುತ್ತಿದೆ. ಅಸ್ಪೃಶ್ಯರು ಹಿಂದುಳಿದ ಜಾತಿಗಳು ಇವರ ಕಾರ್ಯಕ್ಕೆ ಸಿಕ್ಕಿ ಬಲಿಪಶುಗಳಾಗಿದ್ದಾರೆ. ಸಾಮಾಜಿಕ ಮತ್ತು ಆರ್ಥಿಕ ಅಸಮಾನತೆಗಳನ್ನು ಉಳಿಸಿಕೊಂಡು ಬಲಪಡಿಸಲು

ಆಳುವ ವರ್ಗಗಳು ಜಾತಿಯನ್ನು ಒಂದು ಅಸ್ತ್ರವನ್ನಾಗಿ ಬಳಸುತ್ತಿವೆ. ನಮ್ಮ ಸಾಮಾಜಿಕ, ಆರ್ಥಿಕ ವ್ಯವಸ್ಥೆಯಲ್ಲಿ ರಾಜಿ ಮಾಡಿಕೊಳ್ಳಲಾಗದ ವೈರುಧ್ಯಗಳು ತುಂಬಿವೆ. ಶೋಷಿತ ಜನತೆಯ ಆಶೋತ್ತರಗಳಾದ ಸ್ವಾತಂತ್ರ್ಯ, ಭ್ರಾತೃತ್ವ, ನ್ಯಾಯ ಇವುಗಳನ್ನು ನಿತ್ಯ ಜೀವನದಲ್ಲಿ ವಿರೋಧಿಸುವುದಲ್ಲದೆ ಅವುಗಳನ್ನು ಆಳುವ ಪ್ರಭುಗಳು ದಮನಗೊಳಿಸುತ್ತಿದ್ದಾರೆ. ಆದ್ದರಿಂದ ಶೋಷಿತ ವರ್ಗದ ಹಿತಾಸಕ್ತಿಯನ್ನು ಕಾಪಾಡಲು ದಲಿತರು ರಾಜಕೀಯ ಶಕ್ತಿಯನ್ನು ಉಪಯೋಗಿಸಿಕೊಳ್ಳುವ ಅನಿವಾರ್ಯತೆ ಇದೆ. ಅಧಿಕಾರಕ್ಕೆ ರಾಜಕೀಯಕ್ಕೆ ಹಂಬಲಿಸದೆ ವಿಮೋಚನಾ ರಾಜಕೀಯವನ್ನು ಎತ್ತಿ ಹಿಡಿಯಬೇಕಾಗಿದೆ. ಮತೀಯ ಪ್ರವೃತ್ತಿಯ ರಾಜಕಾರಣಿಗಳು ಜನರ ಮಧ್ಯೆ ಸಾಮಾಜಿಕ ಐಕ್ಯತೆಗೆ ಬದಲಾಗಿ ತರ್ಕರಹಿತ ಹಾಗೂ ಅವೈಚಾರಿಕ ಪ್ರವೃತ್ತಿಗಳನ್ನು ಬಿತ್ತುತ್ತಿದ್ದಾರೆ. ಇಂತಹ ಮತೀಯ ರಾಜಕಾರಣವನ್ನು ವಿರೋಧಿಸುತ್ತಾ ತುಳಿತಕ್ಕೊಳಗಾದ ಜನರನ್ನು ಸಂಘಟಿಸಿ ವರ್ಗ ಮತ್ತು ಜಾತಿರಹಿತ ಸಮಾಜವನ್ನು ಕಟ್ಟುವುದು ದಲಿತ ರಾಜಕಾರಣದ ಮುಖ್ಯ ಧ್ಯೇಯವಾಗಿದೆ.[೨೯] ರಾಜಕಾರಣ ಎಂಬುದು ಅಂತಿಮವಾಗಿ ಅದು ಸಮಾಜಮುಖಿ ಆಗಿರಬೇಕು. ಆದರೆ ಇಂದಿನ ಭಾರತದ ಒಟ್ಟು ಪರಿಸ್ಥಿತಿಯನ್ನು ನೋಡಿದರೆ ಅತ್ಯಂತ ನಿರಾಸೆ ಹುಟ್ಟುತ್ತದೆ. ರಾಜಕಾರಣ ವೈಯಕ್ತಿಕ ಮಟ್ಟದ ಹಿತಾಸಕ್ತಿಯನ್ನು ಪ್ರಾಮುಖ್ಯವಾಗಿ ಅವಲಂಬಿಸಿಕೊಂಡಿದೆ. ರಾಜಕಾರಣಕ್ಕೆ ಸಾಮಾಜಿಕ ಹಿತ ಚಿಂತನೆ, ಸಾಂಸ್ಕೃತಿಕ ಸ್ವಾಸ್ಥ್ಯದ ಬಗೆಗೆ ಕಾಳಜಿ ಇಲ್ಲವೆಂಬುದನ್ನು ಇತ್ತೀಚಿನ ದಿನಗಳಲ್ಲಿ ನಮಗೆ ಕಾಣಿಸುತ್ತದೆ. ಸಾಮಾಜಿಕ ರಾಜಕಾರಣದಲ್ಲಿ ಅಲ್ಲೊಬ್ಬ ಇಲ್ಲೊಬ್ಬ ಕಂಡರೂ ಆತನಿಗೆ ರಾಜಕಾರಣದಲ್ಲಿ ಪ್ರಾಮುಖ್ಯತೆ ಸಿಕ್ಕಿಲ್ಲ. ನಮ್ಮ ರಾಜಕಾರಣವು ನಿಂತ ನೀರಾಗಿದೆಯೇ ಹೊರತು ಹರಿಯುವ ನೀರಾಗಿಲ್ಲ. ಸ್ಥಾಪಿತ ರಾಜಕಾರಣವು ದೇಶ, ಸಮಾಜ ಮತ್ತು ಸಮುದಾಯಗಳ ಬಗೆಗೆ ಕಿಂಚಿತ್ತು ಯೋಚಿಸುತ್ತಿಲ್ಲ. ಅಧಿಕಾರ ಮತ್ತು ಹಣ ಈ ರಾಜಕಾರಣದ ಕೇಂದ್ರ ನೆಲೆ ಆಗಿರುವುದನ್ನು ಯಾರೂ ಅಲ್ಲಗಳೆಯುವಂತಿಲ್ಲ. ಇಂಥ ಸಂದರ್ಭದಲ್ಲಿ ನಾವು ಮಾಡಬೇಕಾದ ಕಾರ್ಯ ಏನು ಎಂಬುದನ್ನು ಆಳವಾಗಿ ಚಿಂತಿಸಬೇಕಾಗಿದೆ.[೩೦]

ಅಂಬೇಡ್ಕರ್ ಅವರು ತಮ್ಮ ಜೀವಿತಾವಧಿಯಲ್ಲಿ ಮಾಡಿದ ಪ್ರತಿ ಹೋರಾಟ, ಚಳುವಳಿಗಳು ಇಟ್ಟ ಒಂದೊಂದು ಹೆಜ್ಜೆಯೂ ಭಾರತದ ಅಸ್ಪೃಶ್ಯರು ಹಾಗೂ ಶೋಷಿತರ ಹಿತ ಚಿಂತನೆಯ ರಾಜಕೀಯ ಹೆಜ್ಜೆಗಳಾಗಿವೆ. ಏಕೆಂದರೆ ದಲಿತರು ಆಳುವ ವರ್ಗವಾಗಬೇಕು, ರಾಜಕೀಯ ಅಧಿಕಾರವನ್ನು ಪಡೆಯಬೇಕು ಎಂಬುದು ಅವರ ಮಹದಾಸೆಯಾಗಿತ್ತು. ಯಾವಾಗ ದಲಿತರು ರಾಜಕೀಯ ಅಧಿಕಾರವನ್ನು ಪಡೆದುಕೊಳ್ಳುತ್ತೀರೋ ಅವತ್ತು ನೀವು ಪರಿವರ್ತನೆಯನ್ನು ಸುಲಭವಾಗಿ ಮಾಡಬಹುದು ಎಂಬ ಅಭಿಪ್ರಾಯವನ್ನು ಹೊಂದಿದ್ದರು. ಹಿಂದುಗಳು ದಲಿತರ ಮೇಲೆ ದಬ್ಬಾಳಿಕೆ, ದೌರ್ಜನ್ಯ, ಶೋಷಣೆ ಮಾಡಲು ಅವರಲ್ಲಿರುವ ಅಧಿಕಾರವೇ ಮೂಲಕಾರಣ. ಇವುಗಳನ್ನು ತಡೆಯಬೇಕಾದರೆ ದಲಿತರು, ಅಸ್ಪೃಶ್ಯರು, ಶೋಷಿತರು ಅಧಿಕಾರ ಪಡೆಯಬೇಕು ಎಂದರ್ಥವಾಗಿತ್ತು.

ದಲಿತರ ಸ್ಥಿತಿಯಲ್ಲಿ ಪರಿವರ್ತನೆ, ಬದಲಾವಣೆಯನ್ನು ಕೇವಲ ಹೋರಾಟದಿಂದ ತರಲು ಸಾಧ್ಯವಿಲ್ಲ. ರಾಜಕೀಯ ಅಧಿಕಾರ ಪಡೆದುಕೊಂಡರೆ ಮಾತ್ರ ಪರಿವರ್ತನೆ ತರಲು ಸಾಧ್ಯ. ಸಮಗ್ರ ವ್ಯವಸ್ಥೆಯನ್ನು,

ಸಮಸ್ಯೆಗಳನ್ನು ಬಗೆಹರಿಸಲು ರಾಜಕೀಯ ಅಧಿಕಾರ ಅವಶ್ಯಕವಾಗಿದೆ. ಒಂದು ಉತ್ತಮ ಸಮಾಜ ನಿರ್ಮಾಣಕ್ಕಾಗಿ ಶೋಷಿತರೆಲ್ಲರೂ ಒಂದಾಗಿ ಸ್ವತಂತ್ರ ರಾಜಕೀಯ ಶಕ್ತಿಯಾಗಬೇಕು ಎಂಬುದು ಚನ್ನಿಗರಾಮಯ್ಯನವರ ವಿಚಾರಧಾರೆಯಾಗಿದೆ. ನಂತರ ರಾಜಕೀಯ ಅಧಿಕಾರದ ಗದ್ದುಗೆ ಏರಿ ಶೋಷಿತರ ವಿಮೋಚನೆಗಾಗಿ ಸಮಾಜದ ಸಮಗ್ರ ಬದಲಾವಣೆ ತರಲು ಸಾಧ್ಯವಾಗುತ್ತದೆ ಎಂಬುದು ಇವರ ಚಿಂತನೆಗಳಾಗಿದ್ದವು. ಭಾರತ ದೇಶದ ಎಲ್ಲಾ ಬದಲಾವಣೆಗಳಿಗೆ ರಾಜಕೀಯ ಶಕ್ತಿಯು ಒಂದು ಸಾಧನ ಇದ್ದಂತೆ. ಇಂಥ ಸಾಧನವನ್ನು ದಲಿತರು ಬಳಸಿಕೊಂಡು ತಮ್ಮ ಸ್ಥಾನಮಾನವನ್ನು ಉತ್ತಮಪಡಿಸಿಕೊಳ್ಳಬೇಕು ಎಂದಿದ್ದಾರೆ.[೩೦] ದಲಿತರು ರಾಜಕೀಯ ಅಧಿಕಾರವನ್ನು ಪಡೆದರೆ ಮಾತ್ರ ಸಂಪತ್ತಿನಲ್ಲಿ ಸಮಪಾಲು ಪಡೆಯುವುದು ಸಾಧ್ಯ. ರಾಜಕೀಯ ಅಧಿಕಾರ ಇಲ್ಲದೇ ಹೋದರೆ ಸಂಪತ್ತಿನ ಪಾಲು ಸಿಗುವುದಿಲ್ಲ. ಇದನ್ನು ಅರಿತು ದಲಿತರು ರಾಜಕೀಯ ಅಧಿಕಾರವನ್ನು ಪಡೆಯಲು ಮುಂದಾಗಬೇಕೆಂದಿದ್ದಾರೆ.[೩೧] ಸಮುದಾಯದ ಯುವಕರಿಗೆ ರಾಜಕೀಯ ಪ್ರವೇಶಿಸುವಂತೆ ಪ್ರೇರಣೆ ನೀಡುತ್ತಿದ್ದರು.

## ಅಡಿಟಿಪ್ಪಣಿಗಳು

೦೧. ಡಾ.ಎನ್.ಚಿನ್ನಸ್ವಾಮಿ ಸೋಸಲೆ (ಸಂ), ಡಾ.ಬಿ.ಆರ್.ಅಂಬೇಡ್ಕರ್ ಮತ್ತು ಸಮಕಾಲೀನ ದಲಿತರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦, ಪುಟ-೨೨೪

೦೨. ಡಾ.ವಿ.ಮುನಿವೆಂಕಟಪ್ಪ (ಸಂ), ಅಂಬೇಡ್ಕರ್ ವಾದ, ಅರಹು-ಕುರುಹು ಪ್ರಕಾಶನ, ಮೈಸೂರು, ೨೦೧೦, ಪುಟ-೧೫೦

೦೩. ಜಿ.ಎಂ.ಕೃಷ್ಣಮೂರ್ತಿ, ಬಾಬಾ ಸಾಹೇಬ್ ಅಂಬೇಡ್ಕರ್, ಕಾಮದೇನು ಪ್ರಕಾಶನ, ೨೦೦೪, ಪುಟ-೧

೦೪. ಕ್ಷೇತ್ರಕಾರ್ಯ

೦೫. ಸೂರ್ಯನಾಥ ಕಾಮತ್ (ಸಂ), ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಭಾಗ-೩, ಕರ್ನಾಟಕ ರಾಜ್ಯ ಸರ್ಕಾರ, ಬೆಂಗಳೂರು, ೧೯೯೮, ಪುಟ-೨೦೧

೦೬. ಶ್ರೀನಿವಾಸ ಎಲ್., ತುಮಕೂರು ಜಿಲ್ಲೆಯಲ್ಲಿ ಗಾಂಧೀಜಿಯವರ ರಚನಾತ್ಮಕ ಕಾರ್ಯಕ್ರಮಗಳು, ಕನ್ನಡ ವಿಶ್ವವಿದ್ಯಾಲಕ್ಕೆ ಸಾದರ ಪಡಿಸಿದ ಎಂ.ಫಿಲ್ ನಿಬಂಧ, ೨೦೦೭, ಪುಟ-೭೦

೦೭. ಎಸ್.ನಾಗರತ್ನಮ್ಮ, ತುಮಕೂರು ಜಿಲ್ಲೆಯಲ್ಲಿ ಸ್ವಾತಂತ್ರ್ಯ ಚಳುವಳಿ, ದೇಸಿ ಪುಸ್ತಕ ಪ್ರಕಾಶನ, ಬೆಂಗಳೂರು, ೨೦೦೯, ಪುಟ-೫೫

೦೮. ಅದೇ ಗ್ರಂಥ, ಪುಟ-೫೬

೦೯. ಅದೇ ಗ್ರಂಥ, ಪುಟ-೫೭

೧೦. ಡಾ.ಎನ್.ಚಿನ್ನಸ್ವಾಮಿ ಸೋಸಲೆ, ಭಾರತೀಯ ಸಮಾಜ ಮತ್ತು ದಲಿತರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮, ಪುಟ-೪೮

೧೧. ಡಾ.ಎಚ್.ಕುಮಾರಸ್ವಾಮಿ, ದಲಿತ ಚಳವಳಿ ಮತ್ತು ಸಾಮಾಜಿಕ ನ್ಯಾಯ, ದಲಿತ ಅಭಿವೃದ್ಧಿ ಸಂಸ್ಥೆ, ಹೊಸಪೇಟೆ, ೨೦೧೦, ಪುಟ-೯೬

೧೨. ಡಾ.ಎನ್.ಚಿನ್ನಸ್ವಾಮಿ ಸೋಸಲೆ, ಭಾರತೀಯ ಸಮಾಜ ಮತ್ತು ದಲಿತರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮, ಪುಟ-೧೩

೧೩. ಎಂ.ಜಿ.ನಾಗರಾಜ, ಡಾ.ಪಿ.ವಿ.ಕೃಷ್ಣಮೂರ್ತಿ (ಸಂ)., ಇತಿಹಾಸ ದರ್ಶನ, ಸಂಪುಟ-೧೮, ಕರ್ನಾಟಕ ಇತಿಹಾಸ ಅಕಾಡೆಮಿ (ರಿ), ಬೆಂಗಳೂರು, ೨೦೦೩, ಪುಟ-೩೧೦

೧೪. ಸಂದರ್ಶನ, ರಾಜವರ್ಧನ, ದಿನಾಂಕ ೨೯.೦೨.೨೦೧೨

೧೫. ಎಸ್.ನಾಗರತ್ನಮ್ಮ, ತುಮಕೂರು ಜಿಲ್ಲೆಯಲ್ಲಿ ಸ್ವಾತಂತ್ರ್ಯ ಚಳುವಳಿ, ದೇಸಿ ಪುಸ್ತಕ ಪ್ರಕಾಶನ, ಬೆಂಗಳೂರು, ೨೦೦೯, ಪುಟ-೫೩

೧೬. ಭರಂಪುರ ಕಣುಮಪ್ಪ, ಮಾತಂಗ ಸಮಾಜದ ದಿಗ್ದರ್ಶಕರು, ಆದಿಜಾಂಬವ ವಿದ್ಯಾಭಿವೃದ್ಧಿ ಟ್ರಸ್ಟ್, ಬೆಂಗಳೂರು, ೨೦೧೦, ಪುಟ-೨೯

೧೭. ಡಾ.ಟಿ.ಆರ್.ಚಂದ್ರಶೇಖರ್ (ಸಂ), ದಲಿತ ಅಧ್ಯಯನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೫, ಪುಟ-೩೦೯

೧೮. ಅದೇ ಗ್ರಂಥ, ಪುಟ-೧೯೧

೧೯. ಕ್ಷೇತ್ರಕಾರ್ಯ

೨೦. ಮೈಸೂರು ಲೆಜಿಸ್ಲೇಟಿವ್ ಅಸೆಂಬ್ಲಿ ರಿಪೋರ್ಟ್-೧೯೫೬

೨೧. ಮೊಗಳ್ಳಿ ಗಣೇಶ (ಸಂ), ದಲಿತ ಚಿಂತನೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಲಾಯ, ಹಂಪಿ, ೨೦೦೨, ಪುಟ-೫೦

೨೨. ಮೊಗಳ್ಳಿ ಗಣೇಶ್, ದಲಿತರು ಮತ್ತು ಜಾಗತೀಕರಣ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯, ಪುಟ-೧೦೮

೨೩. ಡಾ.ಎನ್.ಚಿನ್ನಸ್ವಾಮಿ ಸೋಸಲೆ, ನಾಲ್ವಡಿ ಕೃಷ್ಣನ ಮೈಸೂರು(ಸಾಮಾಜಿಕ, ಆರ್ಥಿಕ, ಅಭಿವೃದ್ಧಿ ನೆಲೆಯ ಅಧ್ಯಯನ) ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬, ಪುಟ-೭೧

೨೪. ಅದೇ ಗ್ರಂಥ, ಪುಟ-೭೨

೨೫. ಸಂದರ್ಶನ, ರಾಜವರ್ಧನ(ಮಾಜಿ ಮಂತ್ರಿಗಳು), ದಿನಾಂಕ ೧೮.೦೨.೨೦೧೨

೨೬. ಸ್ವಾಮಿ ಕೆ.ಎನ್., ಪಂಚಮರ ಆರ್.ಗೋಪಾಲಸ್ವಾಮಿ ಅಯ್ಯರ್ ಒಂದು ಅಧ್ಯಯನ, ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಎಂ.ಫಿಲ್ ನಿಬಂಧ, ಪುಟ-೨೨

೨೭. ವೇಮಗಲ್ ಸೋಮಶೇಖರ್, ಬೆಂಗಳೂರಿನಲ್ಲಿ ಮಹಾತ್ಮಗಾಂಧಿ, ಭಾರತೀಯ ವಿದ್ಯಾಭವನ ವಿಜ್ಞಾನ ಮತ್ತು ಮಾನವೀಯ ಮೌಲ್ಯಗಳ ಗಾಂಧೀ ಕೂಟ, ೨೦೦೪, ಪುಟ-೧೩೮

೨೮. ಸಂದರ್ಶನ, ರಾಜವರ್ಧನ

೨೯. ಡಾ.ಎಚ್.ಕುಮಾರಸ್ವಾಮಿ, ದಲಿತ ಚಳವಳಿ ಮತ್ತು ಸಾಮಾಜಿಕ ನ್ಯಾಯ, ದಲಿತ ಅಭಿವೃದ್ಧಿ ಸಂಸ್ಥೆ, ಹೊಸಪೇಟೆ, ೨೦೧೦, ಪುಟ-೩೯

೩೦. ಡಾ.ಪಿ.ಮಹಾದೇವಯ್ಯ (ಸಂ), ದಲಿತರು ಮತ್ತು ಪರ್ಯಾಯ ರಾಜಕಾರಣ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೫, ಪುಟ-೧೧೦

೩೧. ಉಮಾದೇವಿ ಎಂ.ಪಾಟೀಲ, ಪ್ರೊ.ಬಿ.ಕೃಷ್ಣಪ್ಪನವರ ದಲಿತ ಕಥನ, ಪಲ್ಲವ ಪ್ರಕಾಶನ, ಬಳ್ಳಾರಿ, ೨೦೦೭, ಪುಟ-೧೭

ಅಧ್ಯಾಯ - ಆರು

# ಸಮಾರೋಪ

## ೬.೧.ಅಧ್ಯಯನದ ಫಲಿತಗಳು

ಕರ್ನಾಟಕದ ಪ್ರಥಮ 'ದಲಿತ ಮಂತ್ರಿ ಆರ್.ಚನ್ನಿಗರಾಮಯ್ಯನವರ ಜೀವನ ಮತ್ತು ಸಾಧನೆ' ಎಂಬ ವಿಷಯವನ್ನು ನಿಬಂಧಕ್ಕೆ ಆಯ್ಕೆ ಮಾಡಿ ಅದರ ಅಧ್ಯಯನದಲ್ಲಿ ತೊಡಗಿದ್ದರಿಂದ ಕೆಲವು ಫಲಿತಗಳನ್ನು ಕಂಡುಕೊಳ್ಳಲಾಯಿತು. ಚರಿತ್ರೆಯ ವೈಧಾನಿಕತೆಯನ್ನು ಈ ಅಧ್ಯಯನದಲ್ಲಿ ಅಳವಡಿಸಿ ಆಂತರಿಕ ಮತ್ತು ಬಾಹ್ಯ ವಿಮರ್ಶೆಯನ್ನು ಮಾಡಲಾಗಿದೆ. ಪ್ರಸ್ತುತ ಅಧ್ಯಯನವು ಚನ್ನಿಗರಾಮಯ್ಯನವರ ಸಾಧನೆಯನ್ನು ಕುರಿತದ್ದಾಗಿದೆ. ಅಂದರೆ ಅವರ ಜೀವನ ಪರಿಚಯ, ಪ್ರಭಾವ, ರಾಜಕೀಯ, ಸಾಮಾಜಿಕ, ಶೈಕ್ಷಣಿಕ ಚಿಂತನೆಗಳನ್ನು ಕುರಿತು ವಿಶ್ಲೇಷಿಸುವಂಥದ್ದು. ಸಾಮಾನ್ಯ ದಲಿತ ಕುಟುಂಬದಲ್ಲಿ ಜನಿಸಿದ ಅವರು ಸಮಾಜದಲ್ಲಿ ಕ್ರಾಂತಿಕಾರಕ ಯೋಜನೆಗಳನ್ನು ಕೈಗೊಂಡು ಆ ಮೂಲಕ ಜನರಲ್ಲಿ ಹೊಸತನದ ಅಲೆಯನ್ನೆಬ್ಬಿಸಿ ಸಮಗ್ರ ಸಮಾಜವನ್ನು ಚಲನಶೀಲವಾಗಿಸಿದ ರಾಜ್ಯದ ಅಪುರೂಪ ರಾಜಕಾರಣಿ ಆರ್.ಚನ್ನಿಗರಾಮಯ್ಯ. ಅಸ್ಪೃಶ್ಯತೆಯು ಹಿಂದೂ ಸಮಾಜದ ವರ್ಣವ್ಯವಸ್ಥೆಯಲ್ಲಿನ ಒಂದು ಅನಿಷ್ಟ ಪದ್ಧತಿಯಾಗಿದೆ. ಒಂದೇ ಸಮಾಜದ ಒಂದು ಜಾತಿಯು ಮತ್ತೊಂದು ಜಾತಿಯ ಮೇಲೆ ನಡೆಸಿಕೊಂಡು ಬಂದ ಕ್ರೂರತನವು ಸಾಮಾಜಿಕ ಅಸಹನೆಯಾಗಿದೆ. ಮನುಷ್ಯ ಮನುಷ್ಯನನ್ನೇ ಹಿಂಸಿಸುವ ಈ ಕ್ರೌರ್ಯಕ್ಕೆ ಅಸಹನೆಗೆ, ಅಸಹ್ಯ ಪದ್ಧತಿಗೆ ಸಮಾನವಾದದ್ದು ವಿಶ್ವ ಇತಿಹಾಸದಲ್ಲಿ ಇನ್ನೊಂದು ಇಲ್ಲ. ಅಸ್ಪೃಶ್ಯತೆ ಇಂದು ಸಂಪೂರ್ಣ ನಾಶವಾಗದಿದ್ದರೂ, ಇಂಥ ಅನಿಷ್ಟ ಪದ್ಧತಿಯನ್ನು ನಿರ್ಮೂಲನೆ ಮಾಡುವಲ್ಲಿ ಚನ್ನಿಗರಾಮಯ್ಯ ಅವರು ಪ್ರಾಮಾಣಿಕ ಪ್ರಯತ್ನ ಮಾಡಿದರು ಎನ್ನುವುದರಲ್ಲಿ ಸಂದೇಹವಿಲ್ಲ.

ಗಾಂಧೀಜಿಯವರ ರಚನಾತ್ಮಕ ಕಾರ್ಯಗಳಿಂದ ಪ್ರಭಾವಿತರಾದ ಚನ್ನಿಗರಾಮಯ್ಯನವರು ಅವರ ತತ್ವ ಸಿದ್ಧಾಂತಗಳನ್ನು ಪಾಲಿಸಿದರು. ಅವುಗಳನ್ನು ಅನುಷ್ಠಾನಕ್ಕೆ ತರುವಲ್ಲಿ ಪ್ರಾಮಾಣಿಕ ಪ್ರಯತ್ನ ಮಾಡಿದರು.

ಅಸ್ಪೃಶ್ಯತೆಯನ್ನು ಹೋಗಲಾಡಿಸಲು ದಲಿತರಲ್ಲಿ ಜಾಗೃತಿಯನ್ನು ಉಂಟುಮಾಡಿದರು. ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿ ಸೆರೆಮನೆವಾಸವನ್ನು ಸಹ ಅನುಭವಿಸಿದರು. ದೇಶವು ಸ್ವಾತಂತ್ರ್ಯವಾದ ಮೇಲೆ ೧೯೪೭ ಅಕ್ಟೋಬರ್‌ನಲ್ಲಿ ಕೆ.ಸಿ.ರೆಡ್ಡಿಯವರ ಸರ್ಕಾರವು ಸ್ಥಾಪನೆಯಾದಾಗ ಶ್ರೀ ಚನ್ನಿಗರಾಮಯ್ಯನವರು ರಾಜ್ಯದ ಪ್ರಥಮ ದಲಿತಮಂತ್ರಿಗಳಾದರು ಮತ್ತು ಮೈಸೂರು ರಾಜ್ಯಾಂಗ ವ್ಯವಸ್ಥೆಯ ಸಮಿತಿ ಸದಸ್ಯರಾಗಿ ನೇಮಕವಾದರು. ಮುಂದೆ ನಿಜಲಿಂಗಪ್ಪನವರ ಮಂತ್ರಿಮಂಡಲದಲ್ಲಿಯೂ ೧೯೫೭ರಲ್ಲಿ ಸಚಿವರಾಗಿ ಸೇವೆ ಸಲ್ಲಿಸಿದರು. ಎರಡು ಬಾರಿ ತಮಗೆ ದೊರೆತ ಸಚಿವ ಸ್ಥಾನದಲ್ಲಿ ಸ್ಥಳೀಯ ಸಂಸ್ಥೆ, ವಿದ್ಯಾ ಇಲಾಖೆ, ಅರಣ್ಯ ಮತ್ತು ಕೃಷಿ ಖಾತೆಗಳ ಸಚಿವರಾಗಿ ಶ್ರೀಯುತರು ಪ್ರಾಮಾಣಿಕತೆಯಿಂದಲೂ, ದಕ್ಷತೆಯಿಂದಲೂ ನಿಷ್ಠೆಯಿಂದ ಯಾರ ಮನ ನೋಯಿಸದೇ, ದಾಕ್ಷಿಣ್ಯಕ್ಕೆ ಒಳಗಾಗದೇ ಮಂತ್ರಿಗಳಾಗಿ ಗಣನೀಯ ಸೇವೆ ಸಲ್ಲಿಸಿ ಎಲ್ಲರ ಮೆಚ್ಚುಗೆಗೆ ಪಾತ್ರರಾಗಿದ್ದರು. ಶ್ರೀಯುತರು ಕೆಲಕಾಲ ವಿಧಾನಸಭೆಯ ಉಪಸಭಾಪತಿಗಳಾಗಿ, ಕೆ.ಪಿ.ಎಸ್.ಸಿಯ ಅಧ್ಯಕ್ಷರಾಗಿ, ಹೌಸಿಂಗ್ ಕಮಿಟಿ, ಛೇರ್ಮೆನ್ ಆಗಿ ಕಾರ್ಯ ನಿರ್ವಹಿಸಿದರು. ಇವರ ಅಧಿಕಾರಾವಧಿಯಲ್ಲಿ ಇವರು ವಹಿಸಿಕೊಂಡ ಖಾತೆಗಳಲ್ಲಿ ಅನೇಕ ಸುಧಾರಣೆಗಳನ್ನು ಮತ್ತು ಹೊಸ ಯೋಜನೆಗಳನ್ನು ಜಾರಿಗೆ ತಂದು ರಾಜ್ಯದ ದಲಿತರ ಸರ್ವತೋಮುಖ ಏಳಿಗೆಗೆ ಕಾರಣ ಪುರುಷರಾದರು. ದಲಿತರು ಮತ್ತು ಗಿರಿಜನರಿಗೆ ಉಚಿತ ಗೃಹನಿರ್ಮಾಣ, ಪಾನನಿರೋಧ, ವಿದ್ಯಾರ್ಥಿವೇತನ, ವಿದ್ಯಾರ್ಥಿ ನಿಲಯಗಳ ನಿರ್ಮಾಣ, ಅಸ್ಪೃಶ್ಯತಾ ನಿವಾರಣೆ, ದೇವಾಲಯ ಪ್ರವೇಶ, ಆರ್ಥಿಕ, ಸಾಮಾಜಿಕ ಹಾಗೂ ಶೈಕ್ಷಣಿಕವಾಗಿ ಅಭಿವೃದ್ಧಿ ಹೊಂದಲು ಪ್ರತ್ಯೇಕ ಇಲಾಖೆಯನ್ನು ಸೃಷ್ಟಿಸಿ ಅವರ ಪ್ರಗತಿಗೆ ಶ್ರಮಿಸಿದರು.

ಹೀಗೆ ಚನ್ನಿಗರಾಮಯ್ಯನವರು ಹುಟ್ಟಿದ ಜಿಲ್ಲೆಗೆ, ತಾಲ್ಲೂಕಿಗೆ ಹಾಗೂ ರಾಜ್ಯಕ್ಕೆ ಗಮನಾರ್ಹ ಸೇವೆ ಸಲ್ಲಿಸಿ ರಾಜ್ಯದ ಜನಮನದಲ್ಲಿ ಅಚ್ಚಳಿಯದಂತೆ ನಿಂತು ಕರ್ನಾಟಕದ ಇತಿಹಾಸದಲ್ಲಿ ಅಗ್ರಸ್ಥಾನವನ್ನು ಪಡೆದು ಕಳಶಪ್ರಾಯರಾಗಿರುತ್ತಾರೆ.

### ೬.೨.ಸಂಶೋಧನೆಯ ಅನಿಸಿಕೆಗಳು

ಸಾಮಾಜಿಕ ವಿಜ್ಞಾನಗಳಿಗೆ ಸಂಬಂಧಿಸಿದ ವಿಷಯಗಳ ಸಂಶೋಧನೆಯಲ್ಲಿ ವೈಜ್ಞಾನಿಕ ಪದ್ಧತಿಯನ್ನು ಅಳವಡಿಸುವುದಕ್ಕೆ ಕೆಲವೊಂದು ಇತಿಮಿತಿಗಳು ಎದುರಾಗುತ್ತವೆ. ಇಲ್ಲಿ ಮಾನವ ಮಾನವನನ್ನೇ ಅಧ್ಯಯನ ಮಾಡುವುದರಿಂದ ಮಿತಿಗೊಳಪಟ್ಟು ಖಚಿತವಾದ ತೀರ್ಮಾನಗಳನ್ನು ಹೇಳಲು ಬರುವುದಿಲ್ಲ. ಕಾರಣ ಬದಲಾಗುತ್ತಾ ಸಾಗುವ ಮಾನವನ ಸ್ವಭಾವ ಮತ್ತು ಚಲನಾತ್ಮಕ ಸಮಾಜ ಇವು ಒಂದು ನಿರ್ದಿಷ್ಟ ನಿರ್ಣಯಕ್ಕೆ ಬರಲು ಅಡ್ಡಿಯಾಗುತ್ತವೆ. ಅಲ್ಲದೆ ಯಾವುದೇ ಪ್ರಯೋಗ, ಸನ್ನಿವೇಶ, ಘಟನೆಗಳಿಂದ ಹೊರಬೀಳುವ ಫಲಿತಾಂಶಗಳು ಸಾರ್ವತ್ರಿಕವಾಗಿರುವುದಿಲ್ಲ. ಹಾಗೆಯೇ ಭವಿಷ್ಯವನ್ನು ನುಡಿಯಲು ಸಾಧ್ಯವಿರುವುದಿಲ್ಲ. ಈ ಕಾರಣಗಳಿಂದಾಗಿ ಕೈಗೊಂಡಿರುವ ಅಧ್ಯಯನ ವ್ಯಕ್ತಿಗೆ ಸಂಬಂಧಿಸಿರುವುದರಿಂದ ಇಲ್ಲಿ ಗಮನಿಸಲಾಗಿರುವ ವಿಚಾರಗಳು ಖಚಿತತೆಯಿಂದ ಕೂಡಿವೆ ಎಂದು ವ್ಯಕ್ತಪಡಿಸಲಾಗದಿದ್ದರೂ ಸತ್ಯಕ್ಕೆ ಹತ್ತಿರವಾಗಿವೆ. ಆದರೆ ಹಿಸ್ಟರಿ ರಿಪೀಟ್ಸ್ ಎಂಬ ಮಾತಿನಂತೆ ಇತಿಹಾಸ

ಮರೆತವರು ಇತಿಹಾಸ ಸೃಷ್ಟಿಸಲಾರರು ಎಂಬ ಬಾಬಾ ಸಾಹೇಬ್ ಅಂಬೇಡ್ಕರ್ ಅವರ ಹೇಳಿಕೆ ಸತ್ಯವೆಂದು ಗೋಚರಿಸುತ್ತದೆ. ಈ ಹಿನ್ನೆಲೆಯಲ್ಲಿ ಭಾರತೀಯರು ಪರಕೀಯರ ದಾಸ್ಯದಿಂದ ಮುಕ್ತರಾಗಲು ಹೋರಾಡಿದ ವಿಧಾನ ಮತ್ತು ನಾಡು ಕಟ್ಟುವ ನಿಟ್ಟಿನಲ್ಲಿ ಅಂದು ಹಲವಾರು ಮಹನೀಯರು ಎದುರಿಸಿದ ಸಮಸ್ಯೆಗಳು ನಿಭಾಯಿಸಿದ ರೀತಿ ಇವುಗಳಿಂದ ಸಮಾಜದ ಮೇಲಾದ ಪರಿಣಾಮ ಇವೆಲ್ಲ ಪ್ರಸ್ತುತ ಜನತೆಗೆ ಮಾರ್ಗದರ್ಶಕಗಳಾಗುತ್ತವೆ ಎಂಬುದರಲ್ಲಿ ಯಾವುದೇ ಸಂಶಯವಿಲ್ಲ. ಇಂತಹ ಅನೇಕ ಮಂದಿ ನಾಯಕರಲ್ಲಿ ಆರ್.ಚನ್ನಿಗರಾಮಯ್ಯನವರೂ ಒಬ್ಬರು.

ದಲಿತ ಸಮುದಾಯದ ವ್ಯಕ್ತಿಯೊಬ್ಬರು ನಾಡಿನ ಮಂತ್ರಿ ಪದವಿಯ ಚುಕ್ಕಾಣಿ ಹಿಡಿಯುವುದು ಸುಲಭದ ಮಾತಾಗಿರಲಿಲ್ಲ. ಪ್ರಬಲ ಜಾತಿ ವರ್ಗಗಳ ರಾಜಕಾರಣಿಗಳ ಸ್ಪರ್ಧೆಯ ನಡುವೆಯೂ ಈ ನಾಡಿನ ಒಬ್ಬ ದಲಿತ ಮಂತ್ರಿಯಾಗಿ ಎರಡು ಬಾರಿ ಆಳ್ವಿಕೆ ಮಾಡಿದ ಹೆಗ್ಗಳಿಕೆ ಆರ್.ಚನ್ನಿಗರಾಮಯ್ಯ ಅವರಿಗೆ ಸಲ್ಲುತ್ತದೆ. ಇವರ ಸಮಕಾಲೀನ ಸಂದರ್ಭದಲ್ಲಿ ಇದ್ದಂತಹ ಪ್ರಬಲವಾದ ಜಾತಿಪದ್ಧತಿಯ ನಡುವೆಯೂ ರಾಜಕೀಯ ಸ್ಥಾನಮಾನವನ್ನು ಗಳಿಸಿದ ರೀತಿ ನಿಜಕ್ಕೂ ಆಶ್ಚರ್ಯಕರವಾದ ಸಂಗತಿಯಾಗಿದೆ. ಇಂತಹ ಮಹಾನ್ ವ್ಯಕ್ತಿಗಳ ಬಗೆಗೆ ಸಂಶೋಧನೆಯನ್ನು ಕೈಗೊಂಡದ್ದು ತುಂಬಾ ಸಂತೋಷವನ್ನುಂಟುಮಾಡಿದೆ. ಶ್ರೀಯುತರ ಬಗೆಗೆ ಇದುವರೆವಿಗೂ ಯಾವುದೇ ರೀತಿಯ ಅಧ್ಯಯನ ಆಗಿಲ್ಲದೆ ಇರುವುದು ತುಂಬಾ ನೋವಿನ ಸಂಗತಿಯಾಗಿದೆ. ನಮ್ಮ ಮುಂದಿನ ಪೀಳಿಗೆಗೆ ನಿಜಕ್ಕೂ ಆದರ್ಶಪ್ರಾಯರಾಗಿದ್ದಾರೆ, ಅಂತಹ ಕಠಿಣ ಪರಿಸ್ಥಿತಿಯಲ್ಲಿ ಇದ್ದಂತಹ ಸಮಸ್ಯೆ ಹಾಗೂ ಸವಾಲನ್ನು ಸ್ವೀಕರಿಸಿದ ರೀತಿ ಅವರು ಬೆಳೆದು ಬಂದ ಬಗೆ ನಮಗೆಲ್ಲರಿಗೂ ದಾರಿದೀವಿಗೆಯಾಗಿದೆ. ಚನ್ನಿಗರಾಮಯ್ಯ ಅವರು ತಾಲ್ಲೂಕಿನಲ್ಲಿ ಎಲ್ಲಾ ವರ್ಗದ ಜನರೊಡನೆ ಬೆರೆತು ಅವರಿಂದ ಪ್ರೀತಿ ಪುರಸ್ಕಾರವನ್ನು ಪಡೆದಿದ್ದರು. ಸಮಾಜದಲ್ಲಿ ಸಾವಿರಾರು ವರ್ಷಗಳಿಂದ ಬೇರೂರಿ ಬಂದಿರುವ ಜಾತಿ, ಮತ, ಸ್ಪೃಶ್ಯ, ಅಸ್ಪೃಶ್ಯ, ಮೇಲು ಕೀಳು ಕಳಂಕವನ್ನು ಹೋಗಲಾಡಿಸಿ ಜಾತ್ಯತೀತ ಸಮಾಜ ಸೃಷ್ಟಿಸಲು ಅವರು ನುಡಿದಂತೆ ನಡೆದರು. ಸಮಾಜ ಸುಧಾರಕರ ತತ್ವ ಸಿದ್ಧಾಂತಗಳನ್ನು ಮೈಗೂಡಿಸಿಕೊಂಡು ಅವರ ಆದರ್ಶದಂತೆ ಬಾಳಿದವರು. ದಲಿತರ ಅಭಿವೃದ್ಧಿಗೋಸ್ಕರ ತಮ್ಮಿಂದ ಆದ ಎಲ್ಲಾ ರೀತಿಯ ನೆರವನ್ನು ನೀಡಿದರು. ದಲಿತರು ಕೇವಲ ಪ್ರಬಲ ಜಾತಿಗಳ ಗುಲಾಮರಲ್ಲ. ತಮಗೂ ಸಹ ಎಲ್ಲರಂತೆ ಬಾಳಿ ಬದುಕುವ ಹಕ್ಕಿದೆ ಎಂದು ತೋರಿಸಿಕೊಟ್ಟರು. ಅಜ್ಞಾನದಲ್ಲಿ ಮೈ ಮರೆತ ಮುಗ್ಧ ದಲಿತವರ್ಗದ ಜನತೆಯನ್ನು ಎಚ್ಚರಿಸಿದರು. ಅವರಲ್ಲಿ ಅಪೂರ್ವದಾದ ಸ್ವಾಭಿಮಾನವನ್ನು ಸ್ವಯಂಪ್ರಜ್ಞೆಯನ್ನು ಅನ್ಯಾಯದ ವಿರುದ್ಧ ಸೆಟೆದೇಳುವ ಬಂಡಾಯ ಮನೋಧರ್ಮವನ್ನು ಬೆಳೆಸಿದರು.

ಹೀಗಾಗಿ ದಲಿತ ಮತ್ತು ಕೆಳವರ್ಗದ ಸಮುದಾಯ ಮತ್ತು ಜನತೆ ಚನ್ನಿಗರಾಮಯ್ಯನವರಲ್ಲಿ ತಮ್ಮ ಉದ್ಧಾರಕ್ಕಾಗಿ ನಿಸ್ವಾರ್ಥದಿಂದ ದುಡಿಯುವ ಹೋರಾಡುವ, ಒಬ್ಬ ಚಿಂತನಶೀಲ ನಾಯಕನನ್ನು ಕಂಡುಕೊಂಡವು. ಇವರು ತಮ್ಮ ರಾಜಕೀಯ ಜೀವನದಲ್ಲಿ ಸಮಾಜದ ಅಭಿವೃದ್ಧಿಗೆ ಹೆಚ್ಚು ಶ್ರಮಿಸಿದರು.

ಇಂತಹ ದಲಿತ ಹಾಗೂ ಹಿಂದುಳಿದ ವರ್ಗದವರ ಒಬ್ಬ ನಿಷ್ಠಾವಂತ ಮತ್ತು ಪ್ರಾಮಾಣಿಕ ನಾಯಕನ ಬದುಕು, ದಲಿತ ಹಾಗೂ ಇತರೆ ಜನಾಂಗದ ಮುಂದಿನ ಎಲ್ಲಾ ಪೀಳಿಗೆಗೆ ಒಂದು ಆದರ್ಶ ಪ್ರಾಯ.

ಆರ್.ಚನ್ನಿಗರಾಮಯ್ಯ ಅವರ ಬಗ್ಗೆ ಇದು ಮೊಟ್ಟಮೊದಲ ಸಂಶೋಧನಾ ನಿಬಂಧವಾಗಿದ್ದು ಇದರಲ್ಲಿ ಕೆಲವು ವಿಷಯಗಳನ್ನು ಹುಡುಕಾಟ ಮಾಡಿರುವುದು ಸತ್ಯ. ಇದು ಸಂಶೋಧನೆಯಲ್ಲಿ ಸಣ್ಣ ಪ್ರಯತ್ನವಾಗಿದ್ದು, ಮುಂದಿನ ಸಂಶೋಧಕರು ಇವರ ಬಗ್ಗೆ ಹೆಚ್ಚು ಆಸಕ್ತಿ ವಹಿಸಿ ಸಂಶೋಧನೆಯನ್ನು ಮಾಡಲು ಒಲವನ್ನು ತೋರಬೇಕಾಗಿದೆ. ಆಗ ಮಾತ್ರ ಚನ್ನಿಗರಾಮಯ್ಯ ಅವರ ಸಾಧನೆಗೆ ನ್ಯಾಯ ಒದಗಿಸಲು ಸಾಧ್ಯ.

## ಅನುಬಂಧಗಳು

೧. ಪರಾಮರ್ಶನ ಗ್ರಂಥಗಳು
೨. ಬದುಕಿನ ಮುಖ್ಯ ಘಟನೆಗಳು
೩. ಛಾಯಾಚಿತ್ರಗಳು

## ಅನುಬಂಧ-೧

## ಪರಾಮರ್ಶನ ಗ್ರಂಥಗಳು


೦೧. ಡಾ.ಎನ್.ಚಿನ್ನಸ್ವಾಮಿ ಸೋಸಲೆ, ೨೦೦೮, **ಭಾರತೀಯ ಸಮಾಜ ಮತ್ತು ದಲಿತರು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೦೨. ಡಾ.ಎನ್.ಚಿನ್ನಸ್ವಾಮಿ ಸೋಸಲೆ (ಸಂ)., ೨೦೧೦, **ಡಾ.ಬಿ.ಆರ್.ಅಂಬೇಡ್ಕರ್ ಮತ್ತು ಸಮಕಾಲೀನ ದಲಿತರು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೦೩. ಮೊಗಳ್ಳಿ ಗಣೇಶ್ (ಸಂ)., ೨೦೦೨, **ದಲಿತ ಚಿಂತನೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೦೪. ಡಾ.ಟಿ.ಆರ್.ಚಂದ್ರಶೇಖರ್ (ಸಂ)., ೨೦೦೫, **ದಲಿತ ಅಧ್ಯಯನ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೦೫. ಡಾ.ಎನ್. ಚಿನ್ನಸ್ವಾಮಿ ಸೋಸಲೆ, ೨೦೦೬, **ನಾಲ್ವಡಿ ಕೃಷ್ಣನ ಮೈಸೂರು: ಸಾಮಾಜಿಕ, ಆರ್ಥಿಕ ಅಭಿವೃದ್ಧಿ ನೆಲೆಯ ಅಧ್ಯಯನ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೦೬. ಡಾ.ವಿ.ಮುನಿವೆಂಕಟಪ್ಪ (ಸಂ)., ೨೦೧೦, **ಅಂಬೇಡ್ಕರ್‌ವಾದ,** ಅರುಹು ಕುರುಹು, ಪ್ರಕಾಶನ, ಮೈಸೂರು

೦೭. ಜಿ.ಎಂ.ಕೃಷ್ಣಮೂರ್ತಿ, ೨೦೦೪, **ಬಾಬಾ ಸಾಹೇಬ್ ಅಂಬೇಡ್ಕರ್,** ಕಾಮಧೇನು ಪ್ರಕಾಶನ

೦೮. ಮೊಗಳ್ಳಿ ಗಣೇಶ್, ೧೯೯೯, **ದಲಿತರು ಮತ್ತು ಜಾಗತೀಕರಣ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೦೯. ಡಾ.ಎಚ್.ಕುಮಾರಸ್ವಾಮಿ, ೨೦೧೦, **ದಲಿತ ಚಳವಳಿ ಮತ್ತು ಸಾಮಾಜಿಕ ನ್ಯಾಯ,** ದಲಿತ ಅಭಿವೃದ್ಧಿ ಸಂಸ್ಥೆ, ಹೊಸಪೇಟೆ

೧೦. ಡಾ.ಪಿ.ಮಹಾದೇವಯ್ಯ (ಸಂ)., ೨೦೦೫, **ದಲಿತರು ಮತ್ತು ಪರ್ಯಾಯ ರಾಜಕಾರಣ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೧. ಉಮಾದೇವಿ ಎಂ, ಪಾಟೀಲ, ೨೦೦೭, **ಪ್ರೊ.ಬಿ.ಕೃಷ್ಣಪ್ಪನವರ ದಲಿತ ಕಥನ,** ಪಲ್ಲವ ಪ್ರಕಾಶನ, ಬಳ್ಳಾರಿ

೧೨. ಎಸ್.ನಾಗರತ್ನಮ್ಮ, ೨೦೦೯, **ತುಮಕೂರು ಜಿಲ್ಲೆಯಲ್ಲಿ ಸ್ವಾತಂತ್ರ್ಯ ಚಳುವಳಿ,** ದೇಸಿ ಪುಸ್ತಕ ಪ್ರಕಾಶನ

೧೩. ಭರಂಪುರ ಕಣುಮಪ್ಪ, ೨೦೧೦, **ಮಾತಂಗ ಸಮಾಜದ ದಿಗ್ದರ್ಶಕರು,** ಆದಿಜಾಂಬವ ವಿದ್ಯಾಭಿವೃದ್ಧಿ ಟ್ರಸ್ಟ್, ಬೆಂಗಳೂರು

೧೪. ವೇಮಗಲ್ ಸೋಮಶೇಖರ್, ೨೦೦೪, **ಬೆಂಗಳೂರಿನಲ್ಲಿ ಮಹಾತ್ಮಗಾಂಧಿ,** ಭಾರತೀಯ ವಿದ್ಯಾಭವನದ ವಿಜ್ಞಾನ ಮತ್ತು ಮಾನವೀಯ ಮೌಲ್ಯಗಳ ಗಾಂಧೀಕೂಟ

೧೫. ಎಂ.ಜಿ.ನಾಗರಾಜ, ಡಾ.ಡಿ.ವಿ.ಕೃಷ್ಣಮೂರ್ತಿ (ಸಂ)., ೨೦೦೩, ಇತಿಹಾಸದರ್ಶನ, ಸಂಪುಟ-೧೮, ಕರ್ನಾಟಕ ಇತಿಹಾಸ ಅಕಾಡೆಮಿ (ರಿ)., ಬೆಂಗಳೂರು

೧೬. ಡಾ.ಸೂರ್ಯನಾಥ ಕಾಮತ್ (ಸಂ)., ೧೯೮೯, ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಭಾಗ-೨, ಕರ್ನಾಟಕ ರಾಜ್ಯ ಸರ್ಕಾರ, ಬೆಂಗಳೂರು

೧೭. ಶ್ರೀಮತಿ ಶಾರದಶಂಕರ್, ೨೦೧೧, ಮಗಳ ನೆನಪಿನಾಳದಲ್ಲಿ ಆರ್.ಸಿ., ಆಟದ ಬುಕ್ ಹೌಸ್, ಬೆಂಗಳೂರು

೧೮. ದಾಸನೂರು ಕೂಸಣ್ಣ, ಸಮರ್ಥ ಸಂಸದೀಯ ಪಟು ಡಾ.ಬಾಬು ಜಗಜೀವನರಾಮ್, ಮಾತಂಗ ಪ್ರಕಾಶನ, ಮೈಸೂರು

೧೯. ಡಾ.ಸೂರ್ಯನಾಥ ಕಾಮತ್ ಸಂ., ೧೯೭೭, ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಸಂಪುಟ-೨, ಗೀತಾಬುಕ್ ಹೌಸ್, ಮೈಸೂರು

೨೦. ಹಿ.ಚಿ.ಬೋರಲಿಂಗಯ್ಯ, ೨೦೦೬, ವೈ.ಕೆ.ರಾಮಯ್ಯನವರ ಜೀವನ ಮತ್ತು ಸಾಧನೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೧. ಕವಿತಾಕೃಷ್ಣ (ಸಂ)., ೨೦೦೨, ಜಯಮಂಗಲ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೨೨. ಸೂರ್ಯನಾಥ ಕಾಮತ್, ೧೯೯೨, ಕರ್ನಾಟಕದಲ್ಲಿ ಕ್ವಿಟ್ ಇಂಡಿಯಾ ಚಳುವಳಿ, ಲೋಕ ಶಿಕ್ಷಣ ಗ್ರಂಥಮಾಲೆ, ಹುಬ್ಬಳ್ಳಿ

೨೩. ಡಾ.ಬಿ.ನಂಜುಂಡಸ್ವಾಮಿ (ಸಂ)., ೨೦೦೨, ಕಲ್ಪಸಿರಿ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು,

೨೪. ಕವಿತಾಕೃಷ್ಣ, ೧೯೯೦, ಸ್ವಾತಂತ್ರ್ಯಶ್ರೀ, ಕವಿತಾ ಪ್ರಕಾಶನ, ತುಮಕೂರು

೨೫. ಪ್ರೊ.ಜಿ.ವಿ.ಆನಂದ ಮೂರ್ತಿ (ಸಂ)., ೨೦೦೨, ಜೀವನದಿ, ವೈ.ಕೆ.ರಾಮಯ್ಯ ಟ್ರಸ್ಟ್, ತುಮಕೂರು,

೨೬. ಮುನಿವೆಂಕಟಪ್ಪ (ಸಂ)., ೧೯೯೮, ದಲಿತ ಚಳವಳಿ, ಒಂದು ಅವಲೋಕನ, ವಿಚಾರವಾದಿ ಪ್ರಕಾಶನ, ಮೈಸೂರು

೨೭. ಲಕ್ಷ್ಮಣ್ ತೆಲಗಾವಿ (ಸಂ)., ೨೦೦೬, ಚರಿತ್ರೆ ಅಧ್ಯಯನ, ಸಂಪುಟ-೧, ಸಂಚಿಕೆ-೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೮. ಮೋಹನ್‌ಕೃಷ್ಣ ರೈ.ಕೆ., ೨೦೦೪, ಪ್ರಭುತ್ವ ಮತ್ತು ಜನತೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೯. ಗೋಪಾಲರಾವ್ ಎಚ್.ಎಸ್., ೧೯೯೬, ಕರ್ನಾಟಕದ ಏಕೀಕರಣ ಇತಿಹಾಸ, ನವಕರ್ನಾಟಕ ಪ್ರಕಾಶನ, ಬೆಂಗಳೂರು

೩೦. ತಂಬಂಡ ವಿಜಯ್ ಪೂಣಚ್ಚ (ಸಂ)., ೨೦೦೧, ಚರಿತ್ರೆ ವಿಶ್ವಕೋಶ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೩೧. ದೊರೆಸ್ವಾಮಿ ಎಚ್.ಎಸ್., ೨೦೦೬, ಹೋರಾಟದ ದಿಟ್ಟ ಹೆಜ್ಜೆಗಳು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು

೩೨. ಪ್ರತಿಭಾವಂತ ಸಂಸದೀಯ ಪಟುಗಳ ಬದುಕು ಬರಹ ಮಾಲಿಕೆ, ನಿಜಲಿಂಗಪ್ಪ ಎಸ್., ಕರ್ನಾಟಕ ವಿಧಾನಸಭೆ ಸಚಿವಾಲಯ, ಬೆಂಗಳೂರು

೩೩. ಡಾ.ಎನ್.ಚಿನ್ನಸ್ವಾಮಿ ಸೋಸಲೆ, ೨೦೦೪, ಸಾಮ್ರಾಜ್ಯ ಮತ್ತು ಸಂಸ್ಥಾನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೩೪. ವಿರೂಪಾಕ್ಷಿ ಪೂಜಾರಹಳ್ಳಿ (ಸಂ)., ೨೦೦೫, ದಲಿತರು ಮತ್ತು ಚರಿತ್ರೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೩೫. ಲಕ್ಷ್ಮಣ ಸಿ.ಎಂ., ೨೦೦೦, ತುಮಕೂರು ಜಿಲ್ಲೆಯ ಭೌಗೋಳಿಕ ಪರಿಸರ ಮತ್ತು ಅಭಿವೃದ್ಧಿ, ದರ್ಶನ ಪ್ರಕಾಶನ, ತುಮಕೂರು

೩೬. ಡಾ.ಕೆ.ಎಲ್.ಎನ್.ಮೂರ್ತಿ, ೨೦೦೬, ಮೈಸೂರು ಸಂಸ್ಥಾನದ ರಾಜಕೀಯ ಮತ್ತು ಸಂವಿಧಾನಾತ್ಮಕ ಬೆಳವಣಿಗೆಗಳು, ಚೇತನ ಬುಕ್ ಹೌಸ್, ಮೈಸೂರು

೩೮. Mysore Administration Report- 1947 to 1958

೩೯. Mysore Legislative Assembly Report - 1947 to 1962

೪೦. ಜಿ.ಎಸ್.ನಾರಾಯಣರಾವ್, ೨೦೦೭, ಅಂಬೇಡ್ಕರ್ ಮಹಾಶಯ, ಐ.ಬಿ.ಎಚ್ ಪ್ರಕಾಶನ

## ಎಂಫಿಲ್ ನಿಬಂಧಗಳು ಅಪ್ರಕಟಿತ

೧. ಸ್ವಾಮಿ ಕೆ.ಎಸ್., ಪಂಚಮರ ಆರ್.ಗೋಪಾಲಸ್ವಾಮಿ ಅಯ್ಯರ್ : ಒಂದು ಅಧ್ಯಯನ, ಮಾರ್ಗದರ್ಶಕರು ಡಾ.ಎನ್.ಚಿನ್ನಸ್ವಾಮಿ ಸೋಸಲೆ, ಚರಿತ್ರೆ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮

೨. ವೀಣಾಕುಮಾರಿ ಡಿ.ಎಂ; ಶಿಕ್ಷಣ ತಜ್ಞ ಡಾ.ಎಚ್.ಎಂ.ಗಂಗಾಧರಯ್ಯ ಅವರ ಜೀವನ ಮತ್ತು ಸಾಧನೆ, ಮಾರ್ಗದರ್ಶಕರು ಡಾ.ಎನ್.ಚಿನ್ನಸ್ವಾಮಿ ಸೋಸಲೆ ಚರಿತ್ರೆ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦

೩. ರಾಕೇಶ್ ಹೆಚ್.ಎಸ್., ಮೈಸೂರು ಚಲೋ ಚಳವಳಿ, ಮಾರ್ಗದರ್ಶಕರು: ಡಾ.ಕೆ.ಮೋಹನ್ ಕೃಷ್ಣ ರೈ, ಚರಿತ್ರೆ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮

## ನಿಯತಕಾಲಿಕೆಗಳು

೧. ಪ್ರಬುದ್ಧ ಕರ್ನಾಟಕ
೨. ಹೊಸತು ಹೊಸತು
೩. ಶೂದ್ರ
೪. ಸಾಧನೆ

## ಪತ್ರಿಕೆಗಳು

೧. ಪ್ರಜಾಪ್ರಗತಿ
೨. ಕೊರಟಗೆರೆ ವಾರ್ತೆ
೩. ದಲಿತ ವಾಯ್ಸ್
೪. ಪ್ರಜಾವಾಣಿ
೫. ವಿಜಯ ಕರ್ನಾಟಕ
೬. ಸೊಗಡು

# ಅನುಬಂಧ-೨

## ಬದುಕಿನ ಮುಖ್ಯ ಘಟನೆಗಳು

೦೧. ೧೯೧೧ರಲ್ಲಿ ತುಮಕೂರು ಜಿಲ್ಲೆಯ ಕೊರಟಗೆರೆಯಲ್ಲಿ ಜನನ.

೦೨. ೧೯೨೯ ಪ್ರೌಢಶಾಲೆಗೆ ಸೇರ್ಪಡೆ.

೦೩. ೧೯೩೧ ಎಸ್.ಎಸ್.ಎಲ್.ಸಿಯಲ್ಲಿ ಅನುತ್ತೀರ್ಣ.

೦೪. ೧೯೩೨ ಕೊರಟಗೆರೆ ಪುರಸಭೆ ಮತ್ತು ತುಮಕೂರು ಜಿಲ್ಲಾ ಬೋರ್ಡಿನ ಸದಸ್ಯರು.

೦೫. ೧೯೩೪ ಮಹಾತ್ಮಗಾಂಧೀಜಿಯವರಿಂದ ಬಾಪೂಜಿ ವಿದ್ಯಾರ್ಥಿನಿಲಯದ ಶಂಕುಸ್ಥಾಪನೆ.

೦೬. ೧೯೩೬ ಮೈಸೂರು ಹರಿಜನ ಸೇವಕ ಸಂಘದ ಪ್ರತಿನಿಧಿಯಾಗಿ ದೆಹಲಿ ಮತ್ತು ಕಲ್ಕತ್ತಾಗೆ ತೆರಳಿದರು.

೦೭. ೧೯೩೭ ಮೈಸೂರು ಪ್ರಜಾಪ್ರತಿನಿಧಿ ಸದಸ್ಯರಾದರು.

೦೮. ೧೯೪೧ ಲೆಜಿಸ್ಲೇಟಿವ್ ಕೌನ್ಸಿಲ್‌ನ ಸದಸ್ಯರಾಗಿ ನೇಮಕರಾದರು.

೦೯. ೧೯೪೦ ಮೈಸೂರು ಸುಧಾರಣಾ ಸಮಿತಿ ಸದಸ್ಯರಾದರು.

೧೦. ೧೯೪೭ ಮಂತ್ರಿಗಳಾಗಿ ನೇಮಕವಾದರು.

೧೧. ೧೯೫೦ ಮದ್ರಾಸ್ ಕಾರ್ಪೊರೇಷನ್ ಕಾಯ್ದೆ ಮತ್ತು ಅದರ ಸಮೀಕ್ಷೆ ಪರಿಮಿತಿಗಳ ಅಧ್ಯಯನಕ್ಕೆ ಮದ್ರಾಸ್‌ಗೆ ಹೋದರು.

೧೨. ೧೯೫೦ ಮೈಸೂರಿನಲ್ಲಿ ಅರಣ್ಯ ಸಂಪತ್ತು ಮತ್ತು ಅದರ ಮಹತ್ವ ಎಂಬ ರೇಡಿಯೋ ಕಾರ್ಯಕ್ರಮವನ್ನು ಉದ್ಘಾಟಿಸಿದರು.

೧೩. ೧೯೫೦ ದೆಹಲಿಯಲ್ಲಿ ನಡೆದ ಭಾರತದ ಎಲ್ಲ ಸ್ಥಳೀಯ ಸಂಸ್ಥೆಗಳ ಕಾನ್ಫರೆನ್ಸ್‌ನಲ್ಲಿ ಭಾಗವಹಿಸಿದ್ದರು.

೧೪. ೧೯೫೦ ಭೈರಮಂಗಲ ಮತ್ತು ರಾಮನಗರ ತಾಲ್ಲೂಕಿನಲ್ಲಿ ಹಾಸ್ಟೆಲ್ ಉದ್ಘಾಟನೆ.

೧೫. ೧೯೫೦ ಅಂತರರಾಷ್ಟ್ರೀಯ ಕಾರ್ಮಿಕರ ಸಭೆಯಲ್ಲಿ ಬಾಬು ಜಗಜೀವನರಾಮ್‌ನೊಂದಿಗೆ ಭಾಗವಹಿಸಿದ್ದರು.

೧೬. ೧೯೫೪ ಹೌಸಿಂಗ್ ಕಮಿಟಿ ಛೇರ್ಮನ್.

೧೭. ೧೯೫೪ ಡೆಪ್ಯೂಟಿ ಸ್ಪೀಕರ್ ಆಗಿದ್ದರು.

೧೮. ೧೯೫೬ ಎಸ್.ನಿಜಲಿಂಗಪ್ಪನವರ ಸಚಿವ ಸಂಪುಟದಲ್ಲಿ ಸಚಿವರಾಗಿ ಸೇವೆ ಸಲ್ಲಿಸಿದರು.

೧೯. ೧೯೬೫ ಕೊರಟಗೆರೆಯಲ್ಲಿ ಸರ್ಕಾರಿ ಹೈಸ್ಕೂಲ್ ಶಂಕುಸ್ಥಾಪನೆ.

೨೦. ೧೯೬೯ ಮೈಸೂರು ರಾಜ್ಯ ದಲಿತರ ಮತ್ತು ಗಿರಿಜನರ ಸಮ್ಮೇಳನವನ್ನು ಕೊರಟಗೆರೆಯಲ್ಲಿ ನಡೆಸಿದರು.

೨೧. ೧೯೭೬ ಚನ್ನಿಗರಾಮಯ್ಯ ಅವರ ನಿಧನ.



ಮೈಸೂರು ರಾಜ್ಯದ ಮೊದಲ ಕ್ಯಾಬಿನೆಟ್ ಮಂತ್ರಿಗಳು
ಎಡದಿಂದ ಬಲಕ್ಕೆ ಶ್ರೀ ಆರ್.ಚನ್ನಿಗರಾಮಯ್ಯನವರು, ಎಚ್.ಸಿದ್ದಯ್ಯ,
ಬಿ.ಸಿ.ದಾಸಪ್ಪ, ಕೆ.ಸಿ.ರೆಡ್ಡಿ, ಕೆ.ಟಿ.ಭಾಷ್ಯಂ, ಟಿ.ಸಿದ್ಧಲಿಂಗಯ್ಯ, ಟಿ.ಮರಿಯಪ್ಪ



ತಮ್ಮ ಕುಟುಂಬದವರೊಂದಿಗೆ ಶ್ರೀ ಆರ್.ಚನ್ನಿಗರಾಮಯ್ಯನವರು



ಡಾ. ಬಾಬು ಜಗಜೀವನರಾಮ್ ಅವರೊಂದಿಗೆ ಶ್ರೀ ಚನ್ನಿಗರಾಮಯ್ಯನವರು



ಶ್ರೀ ಜಯಚಾಮರಾಜೇಂದ್ರ ಒಡೆಯರ್ ಅವರೊಂದಿಗೆ ಶ್ರೀ ಚನ್ನಿಗರಾಮಯ್ಯನವರು



ದಲೈಲಾಮಾ ಮತ್ತು ಕಡಿದಾಳ್ ಮಂಜಪ್ಪ ಅವರೊಂದಿಗೆ



ಶ್ರೀ ಚನ್ನಿಗರಾಮಯ್ಯನವರ ಮಗನ ಮದುವೆ ಸಂದರ್ಭದಲ್ಲಿ



ಶ್ರೀ ಭರಣಯ್ಯ ಹಾಗು ಇ.ಎನ್.ಟಿ.,ತಜ್ಞರಾದ ಮಾಣಿಕ್ಯಂ ಅವರೊಂದಿಗೆ

